# ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳಿಗಾಗಿ ಸಂಕಲಿತ ಆಟಿಕೆಗಳು

(ಬಳಸುವವರ ಕೈಪಿಡಿ)

ಡಾ॥ ಎಸ್. ವೆಂಕಟೇಶನ್






ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ,
(ನೈಮಿಶಮ್ ಕ್ಯಾಂಪಸ್) ಮಾನಸಗಂಗೋತ್ರಿ, ಮೈಸೂರು ೬

**ALL INDIA INSTITUTE OF SPEECH AND HEARING (AIISH)**
**Manasagangothri, Mysore - 570 006. India.**

| | | |
|---|---|---|
| Telephone | : | 0821-2514449, 2515410, 2515805, 2515218, 2514313 |
| Guest House | : | 2515786, Security (after office hours) : 2514449 |
| Telefax | : | 0821-2510515 |
| e-mail | : | aiish_dir@yahoo.com, aiish_academic@yahoo.com |
| website | : | www.aiishmysore.org |
| Work Hours | : | 9.00 am to 5.30 pm - Monday through Friday |
| Holidays | : | Central Government Holidays |




Published by

Dr. M. Jayaram
Director, AIISH, Mysore

# ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳಿಗಾಗಿ ಸಂಕಲಿತ ಆಟಿಕೆಗಳು

(ಬಳಸುವವರ ಕೈಪಿಡಿ)

ಡಾ|| ಎಸ್. ವೆಂಕಟೇಶನ್






ಅಖಿಲ ಭಾರತ ವಾಕ್‌ಶ್ರವಣ ಸಂಸ್ಥೆ
(ನೈಮಿಷಂ ಕ್ಯಾಂಪಸ್) ಮಾನಸಗಂಗೋತ್ರಿ, ಮೈಸೂರು ೫೭೦ ೦೦೬

# ಮುನ್ನುಡಿ

ಬೆಳವಣಿಗೆಯ ನ್ಯೂನತೆ ಇರುವ ಮಕ್ಕಳಿಗೆ ಸಂಕಲಿತ ಆಟಿಕೆಗಳ ಹಾಗೂ ಅವುಗಳನ್ನು ಬಳಸುವ ಬಗ್ಗೆ ಬರೆದಿರುವ ಈ ಪುಸ್ತಕವು ತಂದೆ ತಾಯಿಯರು, ಹಾಗೂ ಪೋಷಕರು ವಹಿಸುವ ಪಾತ್ರದ ಬಗ್ಗೆ ಹೆಚ್ಚಿನ ಗಮನಹರಿಸುವತ್ತ ಮಾಡಿರುವ ಒಂದು ಪ್ರಯತ್ನ. ನ್ಯೂನತೆ ಇರುವ ಮಕ್ಕಳಿಗೆ ಬೇಕಾಗುವ ಎಲ್ಲಾ ರೀತಿಯ ತರಬೇತಿಯನ್ನು ಒಂದು ಸಂಸ್ಥೆಯ ಸೀಮಿತ ಪರಿಧಿಯಲ್ಲಿ ಕೊಡಲು ಸಾಧ್ಯವಾಗದಿರಬಹುದು. ಇಂತಹ ಸಂಸ್ಥೆಗಳಲ್ಲಿ ನೀಡುವ ತಿಳಿವಳಿಕೆ (ಮಾಹಿತಿ)ಯನ್ನು ಹೆಚ್ಚಿನಂಶ ಮಾರ್ಗದರ್ಶನ ಎಂದು ಮಾತ್ರ ತಿಳಿಯಬೇಕು. ಇಂತಹ ಸಂಸ್ಥೆಗಳಿಗೆ ಪೋಷಕರು ಮಕ್ಕಳನ್ನು ಕರೆದೊಯ್ಯಬೇಕಾದರೆ ತಜ್ಞರೇ ತಮ್ಮ ಮಕ್ಕಳ ಬಗ್ಗೆ ಎಲ್ಲಾ ರೀತಿಯಲ್ಲೂ ಗಮನ ವಹಿಸುವವರು ಎಂದು ಭಾವಿಸುವುದು ಸರಿಯಲ್ಲ. ತಂದೆ ತಾಯಿಯರ ಹಾಗೂ ಪೋಷಕರ ಪಾತ್ರ ಇದಕ್ಕಿಂತಲೂ ಮಿಗಿಲಾದುದು. ಇದೊಂದು ಪ್ರಾರಂಭ ಮಾತ್ರ ಎಂದು ಯೋಚಿಸುವುದು ಉಚಿತ. ನ್ಯೂನತೆಯುಳ್ಳ ಮಕ್ಕಳ ತಂದೆ ತಾಯಿಯರು ಹಾಗೂ ಪೋಷಕರು ತಮ್ಮ ಮಕ್ಕಳಿಗೂ ಇತರ ಸಾಮಾನ್ಯ ಮಕ್ಕಳಿಗೂ ಇರುವಂತಹ, ಪೋಷಿತ ಹಾಗೂ ಕಲಿಕೆಗೆ ತಕ್ಕುದಾದಂತಹ ವಾತಾವರಣವನ್ನು ನಿರ್ಮಿಸಿ, ಅವಕಾಶಗಳನ್ನು ಕಲ್ಪಿಸಿ, ಅದರಿಂದ ಉಪಯೋಗ ಪಡೆಯುವಂತೆ ಮಾಡಬೇಕಾದ ನಿಟ್ಟಿನಲ್ಲಿ ನ್ಯೂನತೆ ಇರುವ ಮಕ್ಕಳ ಪೋಷಕರ ಪಾತ್ರ ಸಾಮಾನ್ಯ ಮಕ್ಕಳ ಪೋಷಕರ ಪಾತ್ರಕ್ಕಿಂತ ಎರಡು ಪಟ್ಟು ದೊಡ್ಡದು. ಇದರರ್ಥ ಏನೆಂದರೆ ನ್ಯೂನತೆ ಇರುವಂತಹ ಪೋಷಕರ ಪಾತ್ರ ಹಾಗೂ ಅವರು ಮಕ್ಕಳಿಗೆ ಮನೆಯಲ್ಲಿ ನೀಡುವ ತರಬೇತಿ, ತಜ್ಞರು ನೀಡುವ ಸಲಹೆ/ ತರಬೇತಿಗಳಿಗಿಂತಲೂ ಹಿರಿದಾದುದು.

ಈಗ ನಾವು ತಜ್ಞರು ಹಾಗೂ ಪೋಷಕರು ಎದುರಿಸುವ ತೊಂದರೆಗಳನ್ನು ಗಮನಿಸೋಣ. ತಜ್ಞರು ಪೋಷಕರಿಗೆ ಮನೆಯಲ್ಲಿನ ತರಬೇತಿಯ ಬಗ್ಗೆ "ನೀವು ಹಾಗೆ ಮಾಡಬೇಕು, ಹೀಗೆ ಮಾಡಬೇಕು" ಎಂದು ಧಾರಾಳವಾದ ಪುಕ್ಕಟೆ ಸಲಹೆಯನ್ನು ನೀಡುತ್ತಾರೆ. ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ದೈಹಿಕ, ಸಾಮಾಜಿಕ, ನಡವಳಿಕೆ, ಮಾತು-ಭಾಷೆಯಲ್ಲಿ ಕೌಶಲ - ಮುಂತಾದವುಗಳನ್ನು ಬೆಳೆಸುವ ಬಗ್ಗೆ ತಂದೆ ತಾಯಿಯರಿಗೆ ಹಲವಾರು ಸಲಹೆಗಳನ್ನು ನೀಡುತ್ತಾರೆ. ಅದೇನೋ ಸರಿ, ಆದರೆ ಪೋಷಕರು ಎದುರಿಸುವ ಸಮಸ್ಯೆ ಎಂದರೆ ಈ ರೀತಿಯ ತರಬೇತಿಯನ್ನು ಹೇಗೆ ಮಾಡುವುದು ಎನ್ನುವುದು. ಏಕೆಂದರೆ, ಇಂತಹ ತರಬೇತಿಯ ಕ್ರಮ-ವಿಧಾನಗಳ ಬಗ್ಗೆ ಬೇಕಾದಂತಹ ಸೌಲಭ್ಯಗಳು, ಸಾಮಗ್ರಿಗಳು ಸಾಕಷ್ಟು ಇಲ್ಲ. ಬುದ್ಧಿಮಾಂದ್ಯ ಮಕ್ಕಳ ತರಬೇತಿಯ ಬಗ್ಗೆ ತಕ್ಕಷ್ಟು ಉಪಯುಕ್ತ ಸಾಮಗ್ರಿ ನಮ್ಮಲ್ಲಿ ಇದೆ. ಆದರೆ ಇಂತಹ ಒಂದು ಸೌಲಭ್ಯ ಮಾತು-ಭಾಷೆಯಲ್ಲಿ ತೊಂದರೆ ಅನುಭವಿಸುತ್ತಿರುವ/ಹಿಂದೆ ಬಿದ್ದಿರುವ ಮಕ್ಕಳ ತರಬೇತಿಗಾಗಿ ನಿಶ್ಚಯವಾಗಿಯೂ ಇಲ್ಲ. ಆದುದರಿಂದ ಈ ನಿಟ್ಟಿನಲ್ಲಿ ಮಾಡಿರುವ ವೆಂಕಟೇಶನ್‌ರವರ ಈ ಪ್ರಯತ್ನ ಸ್ವಾಗತಾರ್ಹ.

ನಮ್ಮಲ್ಲಿ ಹೆಚ್ಚಿನ ಜನರು ಆಟಿಕೆಗಳನ್ನು ಕೇವಲ ಮನೋರಂಜನೆಯ ವಸ್ತುಗಳು ಎಂದು ಭಾವಿಸುತ್ತಾರೆ. ಆಟಿಕೆಗಳು ಶೈಕ್ಷಣಿಕವಾಗಿಯೂ ಬೆಲೆ ಇರುವವು ಎಂದು ಗಮನಿಸಬೇಕಾದುದು ಅವಶ್ಯಕ. ಆಟಿಕೆಗಳನ್ನು ಕೇವಲ ಮನರಂಜನೆ ಅಥವಾ ಸಲಹೆಗಳ ಸೂಚಕಗಳನ್ನಾಗಿ ಬಳಸಬಾರದು. ವೆಂಕಟೇಶನ್‌ರವರು ಆಟಿಕೆಗಳನ್ನು ಮಕ್ಕಳ ಮನರಂಜನೆಗಲ್ಲದೆ ಶಿಕ್ಷಣಕ್ಕಾಗಿ ಬಳಸಬಹುದೆಂಬ ಸತ್ಯವನ್ನು ಇಲ್ಲಿ ಬಹಳ ಚೆನ್ನಾಗಿ ಬಿಂಬಿಸಿದ್ದಾರೆ. "ಬೇರೆ ಬೇರೆ ಮಕ್ಕಳು ಬೇರೆ ಬೇರೆ ಆಟಿಕೆಗಳನ್ನು ಇಚ್ಛಿಸುತ್ತಾರೆ, ಹಾಗೂ ಬೇರೆ ಬೇರೆ ಆಟಿಕೆಗಳಿಂದ ಸಂತೋಷಪಡುತ್ತಾರೆ: ಆದುದರಿಂದ ಇಲ್ಲಿ ಕೊಟ್ಟಿರುವ ವಿಧಾನಗಳು ಎಲ್ಲಾ ಮಕ್ಕಳಿಗೂ ಅನ್ವಯವಾಗುವುದಿಲ್ಲ: ಆಟಿಕೆಗಳನ್ನು ಉಪಯೋಗಿಸುವ ವಿಧಾನಗಳಲ್ಲೂ ವೈವಿಧ್ಯತೆ ಇರಬೇಕು, ಆಗ ಮಾತ್ರ ಅದು ಫಲಕಾರಿ" ಎಂಬ ಅಂಶದೆಡೆಗೆ ಲೇಖಕರು ಪೋಷಕರ ಗಮನ ಸೆಳೆದಿದ್ದಾರೆ. ಇದರ ಸಾರಾಂಶ ಇಷ್ಟೇ : ಪೋಷಕರು ಏಕತಾನವನ್ನು ಬಿಡಬೇಕು. ಇಲ್ಲಿ ಉಲ್ಲೇಖಿಸಿರುವ ಬೇರೆ ಬೇರೆ ವಿಧಾನಗಳನ್ನು ತಮ್ಮ ತಮ್ಮ ಮಕ್ಕಳ ಅವಶ್ಯಕತೆ ಹಾಗೂ ಅನುಕೂಲಗಳಿಗೆ ತಕ್ಕಂತೆ ಬಳಸಬೇಕು, ತಮ್ಮ ಹಾಗೂ ತಮ್ಮ ಮಕ್ಕಳ ಕಲ್ಪನಾ ಶಕ್ತಿಯನ್ನು ಬೆಳೆಸಬೇಕು.

ಬೆಳವಣಿಗೆಯ ನ್ಯೂನತೆಯು ಮಕ್ಕಳನ್ನು ಇನ್ನಷ್ಟು ತೊಂದರೆಗೊಳಪಡಿಸಬಹುದಾದ ಸಂದರ್ಭಗಳಿಗೆ ನೂಕುತ್ತವೆ. ಅಲ್ಲದೆ ಇವು ಮಕ್ಕಳುಗಳಲ್ಲಿ, ಅರಿವಿನ, ಬುದ್ದಿಯ, ಮಾತು-ಭಾಷೆಯ, ಸಾಮಾಜಿಕ ಹಾಗೂ ಶೈಕ್ಷಣಿಕ ಬೆಳವಣಿಗೆಯಲ್ಲಿ ಹಲವಾರು ಹೊಸ ತೊಂದರೆಗಳನ್ನು ಹುಟ್ಟುಹಾಕುತ್ತವೆ. ಹುಟ್ಟಿನಿಂದಲೇ ಇರುವ ಕಿವುಡುತನ, ಬುದ್ದಿಮಾಂಧ್ಯತೆ, ಕಲಿಕೆಯಲ್ಲಿನ ದೋಷಗಳೇ ಮೊದಲಾದವು ಮಕ್ಕಳ ದೈಹಿಕ, ಶೈಕ್ಷಣಿಕ ಹಾಗೂ ಬುದ್ಧಿಯ ಬೆಳವಣಿಗೆಯನ್ನು ತಡೆಗಟ್ಟಬಲ್ಲವು. ಈ ಪುಸ್ತಕದ ಒಂದು ಮುಖ್ಯ ಅಂಶವೆಂದರೆ ಇದು ಯಾವ ಕಾರಣದಿಂದ ತೊಂದರೆ ಉಂಟಾಗಿದೆ ಎನ್ನುವುದರ ಬಗ್ಗೆ ಹೆಚ್ಚು ತಲೆಕೆಡಿಸಿಕೊಳ್ಳದೆ, ಮಕ್ಕಳಲ್ಲಿರುವ ನ್ಯೂನತೆ ಹಾಗೂ ಬೆಳವಣಿಗೆಯ ಮಟ್ಟದ ಬಗ್ಗೆ ಹೆಚ್ಚು ಗಮನ ಕೊಡುತ್ತದೆ. ಬಹುಶ: ಇದೇ ಒಂದು ನಕಾರಾತ್ಮಕ ಅಂಶವೂ ಆಗಿದೆ. ಪೋಷಕರು ತಮ್ಮ ಮಕ್ಕಳಿಗೆ ಏನನ್ನು ಕಲಿಸಬೇಕು ಅನ್ನುವುದರ ಬಗ್ಗೆ ಮಾತ್ರ ಚಿಂತೆ ಮಾಡುವುದಿಲ್ಲ; ಯಾವುದೇ ಒಂದು ವಿಷಯವನ್ನು ಯಾವ ರೀತಿ ಕಲಿಸಬೇಕು ಅನ್ನುವುದರ ಬಗ್ಗೆಯೂ ಕಾಳಜಿ ಮಾಡುತ್ತಾರೆ. ಈ ಪುಸ್ತಕ "ಏನನ್ನು ಕಲಿಸಬೇಕು" ಎನ್ನುವುದರ ಬಗ್ಗೆ ಹೆಚ್ಚು ಒತ್ತು ಕೊಡುವುದರಿಂದ, ತಂದೆ ತಾಯಿಗಳಿಗೆ ತಮ್ಮ ನ್ಯೂನತೆಯುಳ್ಳ ಮಕ್ಕಳ ಕಲಿಕೆಯಲ್ಲಿ ಪೂರ್ತಿ ಪ್ರಯೋಜನಕಾರಿ ಆಗದೇ ಇರಬಹುದು. ಆದರೂ ಇದೊಂದು ಶುಭಾರಂಭ. ಲೇಖಕರು ಈ ಪುಸ್ತಕದ ಉದ್ದೇಶಗಳೇನು? ಈ ಪುಸ್ತಕದಿಂದ ಯಾವ ರೀತಿಯ ಪ್ರಯೋಜನ ಪಡೆಯಬಹುದು ಎನ್ನುವುದರ ಬಗ್ಗೆ ಪುಸ್ತಕದ ಮೊದಲಲ್ಲೇ ಸ್ಪಷ್ಟವಾಗಿ ಹೇಳಿರುವುದರಿಂದ, ತಂದೆ ತಾಯಿಯರು ಹಾಗೂ ಪೋಷಕರು ಇದನ್ನು ಗಮನದಲ್ಲಿಟ್ಟುಕೊಂಡು ವ್ಯವಹರಿಸಬೇಕು.

ಇಂತಹ ಒಂದು ಆಟಿಕೆಗಳ ಸಂಗ್ರಹವಾಗಲಿ ಅಥವಾ ಅದನ್ನು ಉಪಯೋಗಿಸಲು ಬೇಕಾಗುವ ಪುಸ್ತಕವಾಗಲೀ ಒಂದೇ ಪ್ರಯತ್ನದಲ್ಲಿ ಮುಗಿಯುವಂತಹ ಕೆಲಸವಲ್ಲ. ಇದು ಕಾಲಕ್ರಮೇಣ, ಆದರೆ ಸತತವಾಗಿ ನಡೆಯಬೇಕಾದಂತಹ ಕೆಲಸ. ಈ ಪುಸ್ತಕದಲ್ಲಿ ಬಂದಿರುವಂತಹ ಅನೇಕ ಅಂಶಗಳನ್ನು ಬದಲಾಯಿಸಬೇಕಾಗುತ್ತದೆ, ಅಥವಾ ಪುನ: ಪರೀಕ್ಷೆ ಮಾಡಬೇಕಾಗುತ್ತದೆ. ಹಾಗೂ ಹಲವಾರು ವಿಷಯಗಳನ್ನು ಹೊಸದಾಗಿ ಸೇರಿಸಬೇಕಾಗುತ್ತದೆ. ಇದು ಈ ಪುಸ್ತಕವನ್ನು ಉಪಯೋಗಿಸುವ ತಂದೆ ತಾಯಿಯರು ಹಾಗೂ ಪೋಷಕರು ಮಾಡುವ ಟೀಕೆ ಟಿಪ್ಪಣಿಗಳ ಮೇಲೆ ಹಾಗೂ ಅವರಿಗಾಗಿರುವ ಪ್ರಯೋಜನ, ಅನುಕೂಲತೆಗಳ ಮೇಲೆ ಅವಲಂಬಿತವಾಗಿದೆ. ತಂದೆ ತಾಯಿಯರು ಪುಸ್ತಕವನ್ನು ಉಪಯೋಗಿಸಿದ ಮೇಲೆ ನೀಡುವ ಟೀಕೆ ಟಿಪ್ಪಣಿಗಳು ಲೇಖಕನನ್ನು ಹೆಚ್ಚು ರಚನಾತ್ಮಕಗೊಳಿಸುತ್ತವೆ. ಮತ್ತು ಆತ ಇನ್ನೂ ಒಳ್ಳೆಯ ಕೆಲಸ ಮಾಡುವುದಕ್ಕೆ ಸ್ಫೂರ್ತಿಯನ್ನೂ ಕೊಡುತ್ತವೆ.

ತಂದೆ ತಾಯಿಯರು ಈ ರೀತಿ ತಮ್ಮ ಭಾವನೆಗಳನ್ನು, ತಮ್ಮ ಕುಂದು ಕೊರತೆ ಅಭಿಲಾಷೆಗಳನ್ನು ಲೇಖಕರಿಗೆ ತಿಳಿಸಲು ಈ ಪುಸ್ತಕದಲ್ಲಿಯೇ ನೀಡಲು ಲೇಖಕರು ಯಾವುದಾದರೂ ರೀತಿ ಅನುವುಮಾಡಿಕೊಟ್ಟಿದ್ದರೆ ಬಹಳ ಒಳ್ಳೆಯದಿರುತ್ತಿತ್ತು. ಪರವಾಗಿಲ್ಲ ಬಿಡಿ. ಈಗಲೂ ತಂದೆ ತಾಯಿಯರು, ಪೋಷಕರು ಈ ಕೆಲಸವನ್ನು ಮಾಡುತ್ತಾರೆಂದು ನನ್ನ ನಂಬಿಕೆ. ಲೇಖಕರು ಹೇಳುವ ಹಾಗೆ ಈ ಪುಸ್ತಕದ ಬಗ್ಗೆ ತಂದೆ ತಾಯಿಯರ ಹಾಗೂ ಪೋಷಕರ ಟೀಕೆಗಳಿಗೆ, ಟಿಪ್ಪಣಿಗಳಿಗೆ ಹಾಗೂ ಸೂಚನೆಗಳಿಗೆ ನಮ್ಮಿಂದ ಯಾವಾಗಲೂ ಸುಸ್ವಾಗತ. ಅದಕ್ಕಾಗಿ ನಾವು ಎದುರು ನೋಡುತ್ತಿರುತ್ತೇವೆ.

ಇಂತಹ ಪುಸ್ತಕಗಳಲ್ಲಿ ಉಪಯೋಗಿಸುವಂತಹ ಭಾಷೆ ಬಹಳ ಮುಖ್ಯ. ಏಕೆಂದರೆ, ಪುಸ್ತಕಗಳಿಂದ ಪಡೆಯಬಹುದಾದಂತಹ ಪ್ರಯೋಜನ ಪುಸ್ತಕವನ್ನು ಎಷ್ಟು ಸುಲಭವಾದ ಭಾಷೆಯಲ್ಲಿ ಬರೆಯಲಾಗಿದೆ ಎನ್ನುವುದರ ಮೇಲೆಯೂ ಸಹ ಸ್ವಲ್ಪ ಮಟ್ಟಿಗೆ ಅವಲಂಬಿತವಾಗಿರುತ್ತದೆ. ಮುಖ್ಯವಾಗಿ ಇಂತಹ ಪುಸ್ತಕಗಳಲ್ಲಿ ಬಳಸುವ ಭಾಷೆ, ಪುಸ್ತಕದಿಂದ ಪ್ರಯೋಜನ ಪಡೆಯುವ ವ್ಯಕ್ತಿಗಳ ವಿದ್ಯಾಮಟ್ಟ ಹಾಗೂ ಇಂತಹ ವ್ಯಕ್ತಿಗಳ ಭಾಷಾ ಪ್ರೌಢಿಮೆಯನ್ನು ಗಮನದಲ್ಲಿಟ್ಟುಕೊಳ್ಳಬೇಕು. ನನಗೆ ಲೇಖಕರು ಒಮ್ಮೆ ಹೇಳಿದ್ದರು-"ಈ ಪುಸ್ತಕವನ್ನು ಸಾಧಾರಣವಾಗಿ ಎಸ್.ಎಸ್.ಎಲ್.ಸಿ. ಓದಿದಂತಹ ವ್ಯಕ್ತಿಗಳನ್ನು ಗಮನದಲ್ಲಿಟ್ಟುಕೊಂಡು ಬರೆಯಲಾಗಿದೆ" ಎಂದು. ಸಾಧಾರಣವಾಗಿ ವೆಂಕಟೇಶನ್‌ರವರು ಈ ಪುಸ್ತಕದಲ್ಲಿ ಸರಳವಾದ, ನಿರ್ದಿಷ್ಟವಾದ ಹಾಗೂ ನೇರವಾದ ಭಾಷೆಯನ್ನು ಬಳಸಿದ್ದಾರೆ. ಅವರು ಬರೆದಿರುವಂತಹ ವಿಷಯಗಳು ಹೆಚ್ಚಾಗಿ ಸ್ವಯಂ ವೇದ್ಯ. ಆದರೂ ಕೆಲವು ಕಡೆ ಅವರು ಬಳಸಿರುವಂತಹ

ಭಾಷೆ ಎಸ್. ಎಸ್. ಎಲ್. ಸಿ. ಮಟ್ಟದ ವ್ಯಕ್ತಿಗಳಿಗೆ ಸ್ವಲ್ಪ ಕಷ್ಟವೇ ಎಂದು ನನಗನ್ನಿಸುತ್ತದೆ. ನಮ್ಮಂತಹ ಸಂಸ್ಥೆಯಲ್ಲಿರುವಂತಹ ತಜ್ಞರು ಮತ್ತು ನಮ್ಮಲ್ಲಿಗೆ ಬರುವಂತಹ ಪೋಷಕರು ಮತ್ತು ತಂದೆ ತಾಯಿಯರು ನ್ಯೂನತೆ ಇರುವ ಮಕ್ಕಳ ಶಿಕ್ಷಣದಲ್ಲಿ ಸಮಭಾಗಿಗಳು ಎನ್ನುವಂತಹ ಭಾಷೆ ಬಂದಿದ್ದರೆ ಇನ್ನೂ ಚೆನ್ನಾಗಿರುತ್ತಿತ್ತು. ಆದರೆ ಈಗ ಈ ಸಂಬಂಧ ಶಿಕ್ಷಕ-ಗ್ರಾಹಕ ಎಂಬಂತೆ ನಿರೂಪಿತವಾಗಿದೆ. ಏನೇ ಆದರೂ ಇದೆಲ್ಲದರಿಂದ ನಾವು ಕಲಿತಿದ್ದೇವೆ, ಮುಂದೆಯೂ ಕಲಿಯುತ್ತೇವೆ ಎನ್ನುವ ನಂಬಿಕೆ ನನಗಿದೆ.

ಈ ಪುಸ್ತಕವನ್ನು ಪೋಷಕರು ಒಳ್ಳೆಯ ಮನೋಭಾವದಿಂದ ಸ್ವೀಕರಿಸುವರು ಎಂದು ನಂಬಿದ್ದೇನೆ. ಇದು ತಂದೆ ತಾಯಿಯರು ಹಾಗೂ ತಜ್ಞರ ಮಧ್ಯೆ ಇನ್ನೂ ಹೆಚ್ಚಿನ ಸಮಾಲೋಚನೆಗೆ ದಾರಿ ಮಾಡಿಕೊಡುತ್ತದೆ ಎನ್ನುವುದು ನನ್ನ ನಂಬಿಕೆ ಹಾಗೂ ಮಾತು-ಭಾಷೆಯ ಕಲಿಕೆಗೆ ನೆರವಾಗುವಂತಹ ಇನ್ನಿತರ ಪುಸ್ತಕಗಳು ಬರುತ್ತವೆ, ಬರಲಿ ಎಂದು ನನ್ನ ಆಸೆ.

ಕೊನೆಗೊಂದು ಮಾತು. ವೆಂಕಟೇಶನ್‌ರವರೊಟ್ಟಿಗೆ ನಾನೂ ಸೇರಿ ಇಂತಹ ಒಂದು ಸಂಕಲಿತ ಆಟಿಕೆಗಳಂತಹ ಒಂದು ಒಳ್ಳೆಯ ಬಳುವಳಿಯನ್ನು ತಮ್ಮ ಮಕ್ಕಳಿಗೆ ಕೊಟ್ಟಿದ್ದಕ್ಕಾಗಿ ಎಲ್ಲಾ ತಂದೆ ತಾಯಿಯರನ್ನು, ಪೋಷಕರನ್ನು ಅಭಿನಂದಿಸುತ್ತೇನೆ. ಲೇಖಕರು ಹೇಳುವಷ್ಟು ಸುಲಭವಾಗಿ ಮಕ್ಕಳುಗಳು ಕಲಿಯದೇ ಇದ್ದರೂ ಕೂಡ ಇದೊಂದು ಒಳ್ಳೆಯ ಆರಂಭ ಎಂದು ಹೇಳಬೇಕು.

ಎಲ್ಲರಿಗೂ ಶುಭವಾಗಲಿ,

15 ಜೂನ್ 2004

**ಡಾ. ಎಂ. ಜಯರಾಮ್**
ನಿರ್ದೇಶಕರು,
ಅಖಿಲ ಭಾರತ ವಾಕ್ ಶ್ರವಣ ಸಂಸ್ಥೆ,
ನೈಮಿಷಂ ಆವರಣ, ಮಾನಸಗಂಗೋತ್ರಿ,
ಮೈಸೂರು.

# ಸ್ವೀಕೃತಿಗಳು

ಬೆಳವಣಿಗೆಯಲ್ಲಿ ನ್ಯೂನತೆಗೊಂಡಿರುವ ಮಕ್ಕಳ ಸಮಗ್ರ ಬೌದ್ಧಿಕ, ಭಾವನಾತ್ಮಕ ಹಾಗೂ ಮಾನಸಿಕ ಸಾಮರ್ಥ್ಯಗಳ ಚಟುವಟಿಕೆಗೆ ಹಾಗೂ ವರ್ತನಾ ಸಮಸ್ಯೆಗಳ ಪರಿಣಾಮಕಾರೀ ನಿರ್ವಹಣೆಗೆ ರೂಪಿಸಿರುವ ಈ ಸಂಕಲಿತ ಆಟಿಕೆಗಳ (toy kit) ಈ ಕಿರು ಹೊತ್ತಿಗೆ ಅಥವಾ ಬಳಸುಗರ ಕೈಪಿಡಿಯು ವಿವಿಧ ಕ್ಷೇತ್ರಗಳ ತಜ್ಞರ ದುಡಿಮೆಯಿಂದ ಬಂದ ಫಲವಾಗಿದೆ. ಇದು "ಬೆಳವಣಿಗೆ ನ್ಯೂನತೆಯ ಮಕ್ಕಳ ಪೋಷಕರೇ ಶಿಕ್ಷಕರಾಗಿ ಪಾತ್ರ ನಿರ್ವಹಿಸುವುದರ ಬಗ್ಗೆ" ನಡೆಸಲಾದ ಒಂದು ಪ್ರಾಥಮಿಕ ಸಂಶೋಧನಾ ಅಧ್ಯಯನದ ಫಲವಾಗಿ ಮೂಡಿಬಂದಿದೆ. *

ಈ ಯೋಜನೆಯ ಫಲಾನುಭವಿಗಳಾದ ಬೆಳವಣಿಗೆಯ ನ್ಯೂನತೆ ಮಕ್ಕಳು ಹಾಗೂ ಅವರ ಪೋಷಕರಿಗೆ ಈ ಕಾರ್ಯಯೋಜನೆಯ ಮೂಲಕ ಸಂಕಲಿತ ಆಟಿಕೆಗಳ ಸಾಧನವು ಸಾಕಾರಗೊಳ್ಳಲು ಕಾರಣರಾಗಿ ಈ ಕಾರ್ಯಯೋಜನೆಯ ಪ್ರತಿ ಹಂತದಲ್ಲೂ ಉತ್ತೇಜನ ಪ್ರೋತ್ಸಾಹ ಮತ್ತು ಮಾರ್ಗದರ್ಶನ ನೀಡುತ್ತಾ ಬಂದ ಹಾಗೂ ಸಂಶೋಧನೆಗೆ ಅತಿ ಶೀಘ್ರವಾಗಿ ಮತ್ತು ಉತ್ಸಾಹದಿಂದ ಆರ್ಥಿಕ ನೆರವು ನೀಡಿದ ಅಖಿಲ ಭಾರತ ವಾಕ್‌ಶ್ರವಣ ಸಂಸ್ಥೆಯ ನಿರ್ದೇಶಕರಾದ ಡಾ॥ ಎಂ. ಜಯರಾಂರವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಈ ಕಾರ್ಯ ಯೋಜನೆಯ ಹಲವು ಹಂತಗಳಲ್ಲಿ ಉಪಯುಕ್ತ ಸಲಹೆ ನೀಡಿದ ಹಾಗೂ ಈ ಕಾರ್ಯ ಬುಟ್ಟಿ ಯೋಜನೆಯ ಮಾರ್ಗಸೂಚಿ ಪುಸ್ತಕದ ಆಂಗ್ಲ ಅವತರಣಿಕೆಯನ್ನು ಕನ್ನಡ ಭಾಷೆಗೆ ಅನುವಾದ ಮಾಡಿದ ಡಾ॥ ಕಾಳಯ್ಯ, ಡಾ॥ ಜಿ. ಜಯರಾಂ, ಡಾ॥ ಬಾಲಕೃಷ್ಣ ಆಚಾರ್ಯ ಡಾ॥ ಕಲ್ಯಾಣ್ ಕುಮಾರ್, ಮತ್ತು ಶ್ರೀ ಎಚ್. ರಾಜು, ಜಿ.ವಿ. ಗಣೇಶಯ್ಯ, ಡಾ॥ ಕೆ.ಎಸ್. ಪ್ರೇಮಾ ಮತ್ತು ಡಾ॥ ವೈ.ವಿ. ಗೀತಾ ಇವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

ಈ ಕಾರ್ಯಯೋಜನೆಯಲ್ಲಿ ಸಂಕಲಿತ ಆಟಿಕೆಯ ಜೋಡಣೆ, ಮಾಹಿತಿ ಸಂಗ್ರಹಣೆ, ಕ್ಷೇತ್ರ ಪರೀಕ್ಷೆಗಳು ಮತ್ತು ಈ ಕೈಪಿಡಿಯ ರಚನೆಯ ಪ್ರಯೋಗದಲ್ಲಿ ಸಕ್ರಿಯವಾಗಿ ಶ್ರಮವಹಿಸಿ ಕೆಲಸ ನಿರ್ವಹಿಸಿರುವ ಕುಮಾರಿ ಸುರುಮ (Project Assistant), ಶ್ರೀ ಪುರುಷೋತ್ತಮ್ (Project Assistant), ಕುಮಾರಿ ಪವಿತ್ರಾಗಿಣಿ (Student Counsellor) ಇವರಿಗೆ ವಿಶೇಷ ಕೃತಜ್ಞತೆಗಳು.

ಈ ಸಂಶೋಧನೆಯ ಕಾರ್ಯಕ್ರಮದಲ್ಲಿ ಸಕ್ರಿಯವಾಗಿ ಸಹಕರಿಸಿದ ಪೋಷಕರು ಮತ್ತು ಮುಖ್ಯವಾಗಿ ಮಕ್ಕಳ ಅಧ್ಯಯನದ ಗುಂಪಿನ ಭಾಗವಾಗಿ ತೊಡಗಿಸಿಕೊಳ್ಳುವುದರ ಮೂಲಕ ಕಾರ್ಯಾಗಾರಗಳಲ್ಲಿ ಭಾಗವಹಿಸುವ ಮೂಲಕ, ಈ ಮಾರ್ಗಸೂಚಿಯ ರಚನೆಯ ಸಮಯದಲ್ಲಿ ರಚನಾತ್ಮಕ ಸೂಚನೆಗಳನ್ನು ನೀಡಿದ ಪೋಷಕರಿಗೆ ಕೃತಜ್ಞತೆಗಳನ್ನು ಅರ್ಪಿಸುತ್ತೇವೆ.

• ಆರ್ಥಿಕ ನೆರವು : ಆಖಿಲ ಭಾರತ ವಾಕ್ ಶ್ರವಣ ಸಂಸ್ಥೆ ಸಂಶೋಧನಾ ನಿಧಿ.

*ಸ್ಥಳ: ಮೈಸೂರು*
*ದಿನಾಂಕ: 15 ಜೂನ್ 2004*

**ಡಾ. ಎಸ್ ವೆಂಕಟೇಶನ್**
ಮುಖ್ಯ ಸಂಶೋಧಕರು
CATS for KIDS ಹಂಚಿಕೆ ಯೋಜನೆ
AIISH, Mysore - 06
Email : psycon@sancharnet.in

# ಆತ್ಮೀಯ ಪೋಷಕರೇ

ಈ ಸಂಕಲಿತ ಆಟಿಕೆಗಳನ್ನು ನೀವು ನಿಮ್ಮ ಮಗುವಿಗೆ ಆಯ್ಕೆ ಮಾಡಿರುವುದಕ್ಕಾಗಿ ಹಾರ್ದಿಕ ಅಭಿನಂದನೆಗಳು. ಇದು, ನಿಮ್ಮ ಪುಟ್ಟ ಮಕ್ಕಳಿಗೆ ಶಿಕ್ಷಣ ತರಬೇತಿ ಹಾಗೂ ಚಿಕಿತ್ಸೆ ನೀಡುವಂತಹ ಉಪಕರಣವಷ್ಟೇ ಅಲ್ಲದೆ ಸೂಕ್ತ ಉಡುಗೊರೆಯೂ ಆಗಬಹುದು. ನಿಮ್ಮ ಮಗುವು ಸಾಮಾನ್ಯನೋ ಅಥವಾ ಬೆಳವಣಿಗೆ ನ್ಯೂನತೆಯುಳ್ಳವನೋ ಎಂಬುದರ ಬಗ್ಗೆ ಚಿಂತಿಸಬೇಡಿ. ಅವನು ಹೇಗಿರುತ್ತಾನೋ ಹಾಗೆಯೇ ಒಪ್ಪಿಕೊಳ್ಳಿ. ಈ ಕೈಪಿಡಿಯಲ್ಲಿ ತಿಳಿಸಿರುವ ಕ್ರಮದಂತೆ ಆಟಿಕೆಗಳ ಮೂಲಕ ಶಿಕ್ಷಣ ನೀಡುತ್ತಾ ಹೋದಲ್ಲಿ ಕ್ರಮೇಣ ನಿಮ್ಮ ಮಗುವಿನಲ್ಲಿ ಹೊಸ ಕುಶಲತೆಯ ಅಭಿವೃದ್ಧಿಯನ್ನು ಕಂಡುಕೊಳ್ಳುವುದು ನಿಶ್ಚಿತ. ಇದು ಶಿಕ್ಷಣಕ್ಕೆ ಮತ್ತು ಕಲಿಕೆಗೆ ಅವಕಾಶವನ್ನು ಕಲ್ಪಿಸಿಕೊಡುವ ಒಂದು ಮಾರ್ಗ.

"ನಾವು ನಮ್ಮ ಮಗುವಿಗೆ ಏನನ್ನು ಕಲಿಸಬೇಕು" ಎಂಬುದು ಬಹಳ ಮಂದಿ ಪೋಷಕರು ಕೇಳುವ ಪ್ರಶ್ನೆಯಾಗಿದೆ. ಆರು ವರ್ಷಕ್ಕಿಂತ ಕಡಿಮೆ ವಯಸ್ಸಿನ ಶಾಲಾಪೂರ್ವ ಮಕ್ಕಳಿಗೆ ನಾನೂರು ಚಟುವಟಿಕೆಗಳ ಒಂದು ಪಟ್ಟಿಯು ಈ ಪುಸ್ತಕದಲ್ಲಿದೆ. ಈ ಕೈಪಿಡಿಯಲ್ಲಿ ನೀಡಿರುವ ಪಟ್ಟಿಯನ್ನು ವೈಜ್ಞಾನಿಕ ಆಧಾರಿತ ಸಂಶೋಧನೆಗಳಿಂದ ಸಿದ್ಧಪಡಿಸಲಾಗಿದೆ. ಈ ಪಟ್ಟಿಯ ಹೆಸರು "ಬೆಳವಣಿಗೆ ನ್ಯೂನತೆಯುಳ್ಳ ಶಾಲಾಪೂರ್ವ ಮಕ್ಕಳ ಕಾರ್ಯ ಚಟುವಟಿಕೆಗಳ ಪಟ್ಟಿ" (ವೆಂಕಟೇಶನ್ 2003) ಎಂದು.

ಈ ಪಟ್ಟಿಯಲ್ಲಿ ಎಂಟು ಕಾರ್ಯಕ್ಷೇತ್ರಗಳನ್ನು ಅಳವಡಿಸಿಕೊಳ್ಳಲಾಗಿದೆ. ಅವುಗಳೆಂದರೆ: ಇಂದ್ರಿಯ ಸಂಬಂಧಿತ, ಸಾಮಾನ್ಯಚಲನೆ, ಸೂಕ್ಷ್ಮಚಲನೆ, ಸಂವಹನ, ಆಟ(ಕ್ರೀಡೆ), ಸ್ವಸಹಾಯ, ಅರಿವು ಮತ್ತು ಶೈಕ್ಷಣಿಕ ಪೂರ್ವ ಚಟುವಟಿಕೆಗಳು. ಈ ಪಟ್ಟಿಯಲ್ಲಿ ಕೊಟ್ಟಿರುವ ಎಲ್ಲಾ ಚಟುವಟಿಕೆಗಳನ್ನು ಪ್ರತಿಯೊಂದು ಮಗುವೂ ಮಾಡಲೇಬೇಕೆಂದು ಕಡ್ಡಾಯವೇನಿಲ್ಲ. ಇದು ಕಲ್ಪನಾ ಸಾಮರ್ಥ್ಯವನ್ನು ಪ್ರಚೋದಿಸುವ ಉಪಯುಕ್ತ ಪಟ್ಟಿಯಾಗಿದೆ. ಏಕೆಂದರೆ ಇದು ನಿಮ್ಮ ಮಕ್ಕಳಿಗೆ ಮನೆಯ ತರಬೇತಿ ಕಾರ್ಯಕ್ರಮದಲ್ಲಿ ಕೆಲವು ಚಟುವಟಿಕೆಗಳನ್ನು ಯೋಜಿಸಿ ಮಾಡುವುದಕ್ಕೆ ಮಾರ್ಗದರ್ಶಿಯಾಗುತ್ತದೆ. ನಿಮ್ಮ ಮಗುವಿನ ಅಗತ್ಯಗಳಿಗನುಗುಣವಾಗಿ ಈ ಪಟ್ಟಿಯಲ್ಲಿರುವ ಕಾರ್ಯ ಚಟುವಟಿಕೆಗಳಲ್ಲಿ ಹೊಸದನ್ನು ಅಗತ್ಯವೆನಿಸಿದಲ್ಲಿ ಸೇರಿಸಬಹುದು, ಇರುವುದನ್ನು ಬಿಡಬಹುದು ಅಥವಾ ಮಾರ್ಪಾಡು ಮಾಡಿಕೊಳ್ಳಬಹುದು. ಈ ಪಟ್ಟಿಯಲ್ಲಿ ವಿವರಿಸಿರುವ ಪಾರಿಭಾಷಿಕ ಪದಗಳ ಅರ್ಥ ವಿವರಣೆಯನ್ನು ಈ ಕೈಪಿಡಿಯ ಕೊನೆಯಲ್ಲಿ ಕೊಡಲಾಗಿದೆ.

ಸೂಕ್ತವಾದ ಆಟದ ಸಾಮಾನುಗಳ ಬಳಕೆಯಿಂದ ಮಕ್ಕಳನ್ನು ರಚನಾತ್ಮಕ ಕಲಿಕೆಯಲ್ಲಿ ತೊಡಗಿಸುವುದಕ್ಕೆ ಇದು ಅತ್ಯಾವಶ್ಯಕವಾದ ಉಪಕರಣವಾಗಿದೆ. ಬೇರೆ ಬೇರೆ ಮಕ್ಕಳು ಬೇರೆ ಬೇರೆ ಆಟಗಳನ್ನು ಆಡುತ್ತಾರೆ. ಅವರು ಏನು ಆಟ ಆಡುತ್ತಾರೆ ಎನ್ನುವರು ಅವರ ದೈಹಿಕ ಹಾಗೂ ಮಾನಸಿಕ ವಯಸ್ಸಿನ ಆಧಾರದ ಮೇಲೆ ನಿರ್ಧರಿತವಾಗಿರುತ್ತದೆ. ಪೋಷಕರು ಆಗಿಂದಾಗ್ಗೆ ಅವರ ಮಕ್ಕಳಿಗೆ ಸರಿಯಾದ ಆಟದ ಸಾಮಗ್ರಿಯನ್ನು ಆಯ್ಕೆ ಮಾಡುವುದರಲ್ಲಿ ವಿಫಲರಾಗುತ್ತಾರೆ. ನೀವು ಕಳೆದ ಬಾರಿ ಭೇಟಿ ನೀಡಿದಂತಹ ಆಟದ ಸಾಮಗ್ರಿಯ ಅಂಗಡಿಯಲ್ಲಿ ನಿಮ್ಮ ಮಗುವಿಗೆ ಯಾವ ಆಟಿಕೆಯನ್ನು ಕೊಳ್ಳುವುದೆಂದು ಗೊಂದಲಗೊಂಡಿದ್ದನ್ನು ನೆನಪಿಸಿಕೊಳ್ಳಿ. ಆಟದ ಸಾಮಗ್ರಿಯು ಸುರಕ್ಷಿತವಾಗಿ, ಸರಳವಾಗಿ, ಒರಟು ಬಳಕೆಗೆ, ಮಗು ಬಳಸಲು ಸೂಕ್ತವಾದಂತಹ ಮತ್ತು ಬಾಳಿಕೆ ಬರುವಂತಹ, ವಿಷರಹಿತವಾದ, ಚಿಕ್ಕದಾದ, ಸ್ನೇಹಪರವಾಗಿ ಬಳಸುವಂತಹ, ವಯಸ್ಸಿಗನುಗುಣವಾದ ಮತ್ತು ಕಲಿಕೆಯ ಗುರಿ ಹೊಂದಿರುವಂತಹುದಾಗಿರಬೇಕು. ಅವುಗಳು ತುಂಬಾ ದುಬಾರಿ ಆಗಿರಬೇಕೆಂದೇನಿಲ್ಲ. ನಿಶ್ಚಯವಾಗಿ ಆಟದ ಸಾಮಗ್ರಿಗಳು ಮಕ್ಕಳನ್ನು ಮನರಂಜಿಸುತ್ತವೆ. ಆದರೆ ಅವುಗಳು ಶಿಕ್ಷಣವನ್ನು ಸಹ ನೀಡಬೇಕು. ಮಗುವಿನ ಅರಿವಿಗೆ ಬರದೇನೆ ಆಟದ ಸಾಮಗ್ರಿಗಳು ಮನರಂಜನೆಯ ಜೊತೆಗೆ ಶಿಕ್ಷಣವನ್ನೂ ಕೊಡುತ್ತವೆ.

ಆಟದ ಸಾಮಗ್ರಿಯನ್ನು ಮಗುವಿಗೆ ಕೊಡುವಾಗ ಅವುಗಳ ಬಗ್ಗೆ ಧೀರ್ಘ ವಿವರಣೆಯನ್ನು ನೀಡಿ ಕೊಡಬೇಡಿ. ನೀವು ಕಲಿಸುವಂತಹ ವಿಷಯ ಆದಷ್ಟು ಸುಲಭ ರೀತಿಯಲಿದ್ದರೆ ಒಳ್ಳೆಯದು. ನೀವು ಕಲಿಸುವ ರೀತಿ ಕಠಿಣವಾಗಿದ್ದರೆ ಅಥವಾ ಆಯಾಸವಾಗುವಂತಿದ್ದರೆ ಮಗುವು ಕಲಿಕೆಯಲ್ಲಿ ನಿರಾಸಕ್ತಿಯನ್ನು ಹೊಂದಿ ವಿಫಲಗೊಳ್ಳಬಹುದು. ಪುಟ್ಟ ಮಕ್ಕಳಿಗೆ ತರಬೇತಿಯ ಎಲ್ಲಾ ಚಟುವಟಿಕೆಗಳು, ಸಂತೋಷವಾಗಿ, ತಮಾಷೆಯಾಗಿ, ಸೃಜನಾತ್ಮಕವಾಗಿಯೂ ಇರಬೇಕು. ನೀವು ಹಿಂದೆ ಇದರ ಬಗ್ಗೆ ಯೋಜಿಸಿ ಸ್ಮರಿಸಿದ್ದಿರಬಹುದು, ಆದುದರಿಂದ ಇದನ್ನು "ಕಲಿಕೆಯ ಮತ್ತು ತರಬೇತಿಯ ಪಟ್ಟಿ" ಎನ್ನುವುದರ ಬದಲು "ಸಂಕಲಿತ ಆಟಿಕೆಗಳು" ಎಂದು ಕರೆಯುವುದು ಹೆಚ್ಚು ಸೂಕ್ತವೆನಿಸುತ್ತದೆ.

ಈ ಸಂಕಲಿತ ಆಟಿಕೆಗಳಲ್ಲಿ ಮನಬಂದಂತೆ ಸಾಮಗ್ರಿಗಳನ್ನು ಜೋಡಿಸಿಲ್ಲ. ಪ್ರತಿಯೊಂದು ಸಾಮಗ್ರಿಯನ್ನು ಬಹಳ ವಿವೇಚನೆಯಿಂದ ಯೋಜಿಸಲಾಗಿದೆ. ಇದನ್ನು ಪೋಷಕರು, ವೃತ್ತಿನಿರತರು, ಹಾಗೂ ತಜ್ಞರುಗಳ ಜೊತೆ ಚರ್ಚಿಸಿ ಆ ಚರ್ಚೆಯ ಆಧಾರದ ಮೇಲೆ ಸಿದ್ಧಪಡಿಸಲಾಗಿದೆ. ಪ್ರತಿಯೊಂದು ಮಗುವೂ ವಿಭಿನ್ನ. ಯಾವುದೇ ಎರಡು ಮಕ್ಕಳು ಒಂದೇ ತರಹದ ಆಸಕ್ತಿ ಸಾಮರ್ಥ್ಯಗಳನ್ನು, ಅಥವಾ ಒಂದೇ ವೇಗದಲ್ಲಿ ಕಲಿಯುವ ಸಾಮರ್ಥ್ಯವನ್ನು ಪಡೆದಿರುವುದಿಲ್ಲ. ಆದುದರಿಂದ ಯಾವುದೇ ಎರಡು ಮಕ್ಕಳನ್ನು ಹೋಲಿಸುವುದು ಬೇಡ. ಪ್ರತಿಯೊಂದು ಮಗುವಿನ ಅಗತ್ಯಗಳಿಗನುಗುಣವಾಗಿ ಸರಿಹೊಂದುವಂತಹ ಬೋಧನಾ ಕಾರ್ಯಕ್ರಮಗಳನ್ನು ರೂಪಿಸಬೇಕು.

ವ್ಯಕ್ತಿಗತ ವ್ಯತ್ಯಾಸಗಳಿದ್ದರೂ ಸಹ ಕೆಲವು ಮಕ್ಕಳು ನಿರ್ದಿಷ್ಟವಾದ ವಯಸ್ಸಿನಲ್ಲಿ ಕೆಲವೊಂದು ಸಾಮಾನ್ಯ ಲಕ್ಷಣಗಳನ್ನು ಹೊಂದಿರುತ್ತಾರೆ. ಈ ಆಧಾರದ ಮೇಲೆ ಆಟಿಕೆಯನ್ನು ಮೂರು ಭಾಗಗಳನ್ನಾಗಿ ವಿಂಗಡಿಸಲಾಗಿದೆ, ಆರು ವರ್ಷಕ್ಕಿಂತ ಕಡಿಮೆ ಇರುವ ಉಪಗುಂಪುಗಳಿಗಾಗಿ ಪ್ರತ್ಯೇಕ ಆಟಿಕೆಗಳನ್ನು ರಚಿಸಲಾಗಿದೆ. ಅವುಗಳೆಂದರೆ.

1. ಸಂಕಲಿತ ಆಟಿಕೆಗಳು : ಶಿಶು ಘಟಕ (ಶಿ ಘ) : 0-2 ವರ್ಷ
2. ಸಂಕಲಿತ ಆಟಿಕೆಗಳು : ಬಾಲ್ಯ ಘಟಕ (ಬಾ ಘ) : 2-4 ವರ್ಷ
3. ಸಂಕಲಿತ ಆಟಿಕೆಗಳು : ಶಾಲಾಪೂರ್ವ ಘಟಕ (ಶಾ ಪೂ ಘ) : 4-6 ವರ್ಷ

ಪ್ರತಿಯೊಂದು ಘಟಕದಲ್ಲೂ ಕೊಟ್ಟಿರುವ ವಸ್ತುಗಳು ವಿಭಿನ್ನವಾಗಿವೆ. ಪ್ರತಿ ಮಗುವಿನ ಮಾನಸಿಕ ವಯಸ್ಸಿಗನುಗುಣವಾಗಿ ಚಟುವಟಿಕೆಗಳ ತರಬೇತಿಯನ್ನು ಇದರಲ್ಲಿ ನೀಡಲಾಗಿದೆ. ಮಕ್ಕಳಿಗಾಗಿರುವ ಈ ಆಟಿಕೆಯಲ್ಲಿನ ಪ್ರತಿಯೊಂದು ಘಟಕದಲ್ಲೂ ಎರಡು ವರ್ಷಗಳಿಗಾಗುವಷ್ಟು ಚಟುವಟಿಕೆಗಳನ್ನು ನೀಡಲಾಗಿದೆ. ಕೆಲವು ಪೋಷಕರು ಮಕ್ಕಳ ಆಟಿಕೆಗಳಿಗಾಗಿ ಹೆಚ್ಚು ವೆಚ್ಚ ಮಾಡುವುದಕ್ಕೆ ಹಿಂಜರಿಯುತ್ತಾರೆ. ಈ ಆಟಿಕೆಯ ಬೆಲೆ ಒಂದು ಮಗುವಿಗೆ ದಿನಕ್ಕೆ ಒಂದು ರೂಪಾಯಿಯಷ್ಟು ಬರುತ್ತದೆ. ಒಂದು ಮಗುವಿಗೆ ದಿನಕ್ಕೆ ಒಂದು ರೂಪಾಯಿ ಜಾಸ್ತಿಯಲ್ಲ. ದಿನಕ್ಕೆ ಒಂದು ರೂಪಾಯಿ ಅಂದುಕೊಂಡರೆ 24 ತಿಂಗಳುಗಳ ಜೀವನಕ್ಕೆ ಹೋಲಿಸಿದರೆ ಜಾಸ್ತಿಯೆಂದೆನಿಸಲಾರದು ಅಲ್ಲವೇ? ಇದೇನೂ ದುಬಾರಿಯಲ್ಲ! ಈ ಆಟಿಕೆಯನ್ನು ಹೇಗೆ ರೂಪಿಸಲಾಗಿದೆ ಅಂದರೆ, ಮಗುವು ಕೆಳಹಂತಗಳಲ್ಲಿ ನಿಪುಣತೆಯನ್ನು ಸಾಧಿಸಿದಾಗ ಪೋಷಕರು ಮುಂದಿನ ಆವೃತ್ತಿಗೆ ಸುಲಭವಾಗಿ ಹೋಗಲು ಸಾಧ್ಯವಾಗುವಂತೆ ರೂಪಿಸಲಾಗಿದೆ.

ಈ ಮಾರ್ಗಸೂಚಿಯನ್ನು ಓದಿದ ನಂತರ ನಿಮಗೆ ಇದರಲ್ಲಿರುವ ಮಾಹಿತಿಯನ್ನು ಹೇಗೆ ಕಲಿಸುವುದು, ಎಂದೆನಿಸಬಹುದು ಆದರೆ ಈ ಸಂಕಲಿತ ಆಟಿಕೆಯ ಪುಸ್ತಕದ ಉದ್ದೇಶ ಅದಾಗಿಲ್ಲ. ಆದರೂ ಸಹ ಕೆಲವು ಮಾರ್ಗದರ್ಶನ, ನಿರ್ದೇಶನ, ಸಲಹೆ ಸೂಚನೆಗಳನ್ನು ಕೊನೆಯ ಪುಟಗಳಲ್ಲಿ ನೀಡಲಾಗಿದೆ. ಮಕ್ಕಳಿಗೆ ಹೇಗೆ ಕಲಿಸಬೇಕು? ಎಂಬ ವಿಷಯದ ಬಗ್ಗೆ ಹೆಚ್ಚಿನ ಮಾಹಿತಿಗಾಗಿ ಈ ಕೈಪಿಡಿಯ ಕೊನೆಯಲ್ಲಿ ನೀಡಲಾಗಿರುವ ಗ್ರಂಥಗಳ ಪಟ್ಟಿಯಲ್ಲಿ ಕೊಟ್ಟಿರುವ ಪುಸ್ತಕಗಳನ್ನು ಅವಲೋಕಿಸಲು ಸೂಚಿಸಲಾಗಿದೆ. ಯಾವುದೇ ರೀತಿಯ ಟೀಕೆ, ಟಿಪ್ಪಣಿಗಳಿಗೆ, ವಿಮರ್ಶೆಗಳಿಗೆ ವಿಚಾರಣೆ ಮತ್ತು ಸಲಹೆಗಳಿಗೆ ಸ್ವಾಗತ.

# ವಿಷಯ ಕ್ರಮ

# ಬೆಳವಣಿಗೆ ನ್ಯೂನತೆಯ ಮಕ್ಕಳಿಗೆ ಮನೆಯ ತರಬೇತಿ

ಶಾಲಾಪೂರ್ವ ಮಕ್ಕಳಲ್ಲಿ ಕಂಡು ಬರುವ ಬೆಳವಣಿಗೆ ನ್ಯೂನತೆಗಳು ವಿಭಿನ್ನರೀತಿಯದ್ದಾಗಿರಬಹುದು. ನ್ಯೂನತೆಗೀಡಾಗುವ ಸಂಭವವಿರುವ ಮಕ್ಕಳಗುಂಪು ಒಂದಾದರೆ ಶಾಶ್ವತ ವಿಕಲಾಂಗವಾಗಿರುವ ಮಕ್ಕಳ ಗುಂಪು ಮತ್ತೊಂದು. ಇದರಲ್ಲಿ ಬಾಹ್ಯವಾಗಿ ವ್ಯಕ್ತವಾಗುವ ದೈಹಿಕ ವೈಕಲ್ಯತೆ, ಅಂಧತ್ವ ಅಥವಾ ಬುದ್ಧಿಮಾಂದ್ಯತೆ ಮುಂತಾದ ತೀವ್ರ ಸ್ವರೂಪದ ಸ್ಥಿತಿಗಳಿರಬಹುದು. ಇಲ್ಲವೇ ಹೆಚ್ಚು ವ್ಯಕ್ತಗೊಳ್ಳದ ಶ್ರವಣದೋಷ (ಕಿವುಡುತನ), ಕಲಿಕಾತೊಂದರೆ, ವಿಧಾನಗತಿಯ ಮಾತು ಹಾಗೂ ಭಾಷಾ ಬೆಳವಣಿಗೆ, ತಂತನತೆ, ಅತಿಚಟುವಟಿಕೆ, ವರ್ತನಾದೋಷ, ಹಾಗೂ ಸಮ್ಮಿಳಿತವಾಗಿರುವ ವಿವಿಧ ವಿಕಲತೆಗಳಿರಬಹುದು.

ಒಟ್ಟಾರೆ ಜನಸಂಖ್ಯೆಯ ವಿವಿಧ ನ್ಯೂನತೆಗಳುಳ್ಳ ಮಕ್ಕಳಲ್ಲಿ ಸುಮಾರು ಅರ್ಧದಷ್ಟು ನ್ಯೂನತೆಗೀಡಾಗುವ ಸಂಭವವಿರುವ ಮಕ್ಕಳು ಹಾಗೂ ಇನ್ನರ್ಧ ವಿವಿಧ ನ್ಯೂನತೆಯುಳ್ಳ ಮಕ್ಕಳು – ಎಂದು ಗುರುತಿಸಲಾಗಿದೆ. ಅಂತೆಯೇ ಎನ್.ಎಚ್.ಡಿ. 2001 ರ ಪ್ರಕಾರ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಪ್ರತೀ 1000 ದಲ್ಲಿ ಶೇಕಡ 31 ರಷ್ಟು ಮಕ್ಕಳು ಮತ್ತು ನಗರಪ್ರದೇಶಗಳಲ್ಲಿರುವ ಪ್ರತೀ 1000 ದಲ್ಲಿ ಶೇಕಡ 29 ರಷ್ಟು ಮಕ್ಕಳು ಒಂದಲ್ಲ ಒಂದು ವಿಧದ ನ್ಯೂನತೆಯನ್ನು ಹೊಂದಿರುತ್ತಾರೆ. ಈ ಮೇಲಿನ ಅಂಕಿ ಅಂಶಗಳಿಗಿಂತ ನ್ಯೂನತೆ ಇರುವ ಮಕ್ಕಳನ್ನು ಹೊಂದಿರುವ ಕುಟುಂಬಗಳ ಮನೋಸ್ಥಿತಿ ಹಾಗೂ ಜೀವನ ಶೈಲಿ ಹೆಚ್ಚು ಮುಖ್ಯ. ಆದ್ದರಿಂದ ಇಂತಹ ಮಕ್ಕಳನ್ನು ಎಳೆಯ ವಯಸ್ಸಿನಲ್ಲೇ ಗುರುತಿಸಿ ತೊಂದರೆ ಹೆಚ್ಚಾಗದಂತೆ ತಡೆಗಟ್ಟುವುದು ಹಾಗೂ ಚಿಕಿತ್ಸಾ ಪದ್ಧತಿಯನ್ನು ಅಳವಡಿಸುವುದು ತಜ್ಞರೆಲ್ಲರ ಆದ್ಯ ಕರ್ತವ್ಯವಾಗಿದೆ.

ನ್ಯೂನತೆಯಿರುವ ಚಿಕ್ಕ ಮಕ್ಕಳ ಪುನರ್ವಸತಿ ಸೇವೆಯನ್ನು ಆಸ್ಪತ್ರೆ ಮತ್ತು ಸಂಸ್ಥೆಗಳಲ್ಲಿನ ಮಕ್ಕಳ ಮಾರ್ಗದರ್ಶನ ಕೇಂದ್ರಗಳು, ಹಗಲು ಶಾಲೆಗಳು, ಸಲಹಾ ಕೇಂದ್ರಗಳು, ವಸತಿ ಶಾಲೆಗಳು, ಇತ್ಯಾದಿಗಳ ಮೂಲಕ ನೀಡಲಾಗುತ್ತಿದೆ. ವಾಗ್ವ್ಯಾಪಾತಜ್ಞರು, ನೈದಾನಿಕ ಮನಃ ಶಾಸ್ತ್ರಜ್ಞರು, ಶ್ರವಣ ತಜ್ಞರು ಮತ್ತು ವಾಕ್ ಚಿಕಿತ್ಸಕರು, ಮಕ್ಕಳ ತಜ್ಞರು, ಆಕ್ಯುಪೇಷನಲ್ ಚಿಕಿತ್ಸಕರು, ವಿಶೇಷ ಶಿಕ್ಷಕರು, ಹಾಗೂ ಇನ್ನಿತರ ತಜ್ಞರೆಲ್ಲ ಇಂತಹ ಕೇಂದ್ರಗಳ ಮೂಲಕ ದೇಶದಾದ್ಯಂತ ನಿಸ್ಪೃಹ ಸೇವೆಯನ್ನು ಸಲ್ಲಿಸುತ್ತಿದ್ದಾರೆ.

ಆದರೂ ನ್ಯೂನತೆಯುಳ್ಳ ಜನರಲ್ಲಿ ಪ್ರತಿಶತ 5-10 ಮಂದಿಗೆ ಮಾತ್ರ ಬೇಕಾದ ಸೇವೆ ದೊರೆಯುತ್ತದೆ. ನಮ್ಮ ದೇಶದಲ್ಲಿ ಪುನರ್ವಸತಿ ತಜ್ಞರ ತೀವ್ರ ಕೊರತೆಯಿದೆ. ಸರಿಸುಮಾರು ಪ್ರತಿಶತ 3 ರಿಂದ 5 ಭಾಗ ನ್ಯೂನತೆಯುಳ್ಳ ಜನಸಂಖ್ಯೆಗೆ ಸೇವಾಸೌಲಭ್ಯ ಪ್ರತಿಶತ 0.5 ಕ್ಕಿಂತಲೂ ಕಡಿಮೆಯಿದೆ. ಇದನ್ನೆಲ್ಲ ಗಮನಿಸಿದಾಗ, ಈಗಿರುವಂತೆ ವಿವಿಧ ವೃತ್ತಿತರಬೇತಿ ಸಂಸ್ಥೆಗಳಲ್ಲಿನ ವಿದ್ಯಾರ್ಥಿಗಳ ಸಂಖ್ಯೆಯು ಇದೇ ಪ್ರಮಾಣದಲ್ಲಿ ಮುಂದುವರಿದರೆ, ಇನ್ನೂ ಮೂರು ದಶಕಗಳಲ್ಲಾದರೂ ಈ ಕೊರತೆಯನ್ನು ನೀಗಿಸಲು ಸಾಧ್ಯ ಆಗಬಹುದು.

ಈ ರೀತಿಯಲ್ಲಿ ಪೋಷಕರು ತಮ್ಮ ಮಕ್ಕಳ ನ್ಯೂನತೆಗಳನ್ನು ನಿವಾರಿಸುವ ನಿಟ್ಟಿನಲ್ಲಿ ಜವಾಬ್ದಾರಿಯನ್ನು ಹೊರುವುದು ಅಗತ್ಯ. ಪೋಷಕರೇ ಮಗುವಿನ ಜೀವನದಲ್ಲಿ ಬರುವ ಮೊದಲನೇ ವ್ಯಕ್ತಿಗಳಾದ್ದರಿಂದ, ಪೋಷಕರು ಮಗುವಿನ ಬಗ್ಗೆ ಹೆಚ್ಚು ಕಾಳಜಿ ವಹಿಸಿ ಹಾಗೂ ಅವನೊಂದಿಗೆ ಹೆಚ್ಚಿನ ಸಮಯ ಕಳೆದು ಅವರ ಬದುಕನ್ನು ರೂಪಿಸುವಲ್ಲಿ ಯಶಸ್ವಿಯಾಗಬೇಕು. ಮಗುವಿನ ನ್ಯೂನತೆಗಳನ್ನು ಸರಿಪಡಿಸುವಲ್ಲಿ ತಜ್ಞರ ಪಾತ್ರವನ್ನು ಕಡೆಗಣಿಸಲಾಗದಿದ್ದರೂ ಅವರಿಂದ ಮಗುವಿನ ತೊಂದರೆಯ ನಿವಾರಣೆಗಾಗಿ ಲಭಿಸಬಹುದಾದ ಸಮಯ ದಿನಕ್ಕೆ ಕೆಲವು ಗಂಟೆಗಳಿಗಿಂತಲೂ ಹೆಚ್ಚಾಗಿರುವುದಿಲ್ಲ. ಅಲ್ಲದೆ ಈ ತರಬೇತಿಯು ಅತ್ಯಂತ ಶ್ರಮದಾಯಕವಾಗಿದ್ದು, ನೀವು ಹಾಕುವ ಬಂಡವಾಳಕ್ಕೆ ತಕ್ಕಂತಹ ಪ್ರತಿಫಲ ನೀಡದಿರಬಹುದು.

ಸಾಮಾನ್ಯ ಮಕ್ಕಳ ಪಾಲನಾಕ್ರಮವು ಹಲವೊಮ್ಮೆ ನ್ಯೂನತೆಯುಳ್ಳ ಮಕ್ಕಳ ಪಾಲನೆಯಲ್ಲಿ ಯಶಸ್ವಿಯಾಗುವುದಿಲ್ಲ. ಮಾತ್ರವಲ್ಲದೆ ಕೆಲವು ಸಾರಿ ಇದರಿಂದ ಸಮಸ್ಯೆಗಳು ಜಾಸ್ತಿ ಆಗಲೂಬಹುದು. ಪೋಷಕರಿಗೆ ಹೆಚ್ಚಿನ ಮಾಹಿತಿ ದೊರೆತಲ್ಲಿ ಇಂತಹ ಮಕ್ಕಳ ದಿನನಿತ್ಯದ ತೊಂದರೆಗಳನ್ನು ಸರಾಗವಾಗಿ ಹಾಗೂ ಪರಿಣಾಮಕಾರಿಯಾಗಿ ನಿವಾರಿಸುವಲ್ಲಿ ಅವರಿಗೆ ಹೆಚ್ಚಿನ ಆತ್ಮವಿಶ್ವಾಸವುಂಟಾಗುತ್ತದೆ. ಅಲ್ಲದೆ ಈ ಮಕ್ಕಳ ಹಕ್ಕು ಬಾಧ್ಯತೆಗಳ ಬಗೆಗೆ ಪೋಷಕರಿಗೆ ಹೆಚ್ಚಿನ ತಿಳಿವು (ಅರಿವು) ಮೂಡುತ್ತದೆ.

ಹೆಚ್ಚಿನ ಮಾಹಿತಿ ಅಥವಾ ತಿಳುವಳಿಕೆಗಳಿಂದ ಪೋಷಕರಲ್ಲಿರಬಹುದಾದ ಅಪರಾಧೀ ಮನೋಭಾವ, ಮಾನಸಿಕ ಒತ್ತಡ ಹಾಗೂ ದುಗುಡಗಳು ಕಡಿಮೆಯಾಗುವುದಲ್ಲದೆ, ನ್ಯೂನತೆಯುಳ್ಳ ವ್ಯಕ್ತಿಯ ಹಾಗೂ ಕುಟುಂಬದ ಜೀವನ ಶೈಲಿಯನ್ನು ಉತ್ತಮಗೊಳಿಸಲು ಸಾಧ್ಯವಾಗುತ್ತದೆ. ಪೋಷಕರಿಗೆ ನ್ಯೂನತಾ ನಿರ್ವಹಣಾ ಸಾಮರ್ಥ್ಯವೆಂದರೆ, ಕೇವಲ ವೃತ್ತಿ ತಜ್ಞರನ್ನು ಭೇಟಿಮಾಡುವುದಾಗಲಿ ಅಥವಾ ಕೆಲವು ಗಂಟೆಗಳ ಕಾಲ ವಿಶೇಷ ಶಾಲೆಗಳಿಗೆ ಕಳಿಸುವುದಾಗಲಿ ಅಲ್ಲ. ನ್ಯೂನತೆಯುಳ್ಳ ಮಗುವಿನ ದಿನನಿತ್ಯದ ಸಮಸ್ಯೆಗಳು ಎಷ್ಟು ಸೂಕ್ಷ್ಮತೆಯಿಂದ ಕೂಡಿವೆ ಎಂಬುದನ್ನು ಅವರು ಅರಿತುಕೊಳ್ಳಬೇಕು. ಅಲ್ಲದೆ, ತಮ್ಮಷ್ಟಕ್ಕೆ ತಾವೇ ರಕ್ಷಿಸಿಕೊಳ್ಳಬಹುದಾದ, ಹಕ್ಕುಗಳನ್ನು ಕಾಪಾಡಲು ಅಗತ್ಯವಿರುವ ಉತ್ತಮ ಜ್ಞಾನ, ತಿಳಿವಳಿಕೆಯ ಶಕ್ತಿಯನ್ನು ಹೊಂದಿರಬೇಕಾಗುತ್ತದೆ.

## ಹಂತಗಳು ಮತ್ತು ವಿಧಾನಗಳು

ಕ್ರಮ ಬದ್ಧವಾದ ಮತ್ತು ವೈಜ್ಞಾನಿಕವಾದ ವಿಧಾನಗಳನ್ನು ಅಳವಡಿಸಿಕೊಂಡು ಬೆಳವಣಿಗೆಯಲ್ಲಿ ನ್ಯೂನತೆಯುಳ್ಳ ಮಕ್ಕಳಿಗೆ ಮನೆಯಲ್ಲಿ ತರಬೇತಿಯನ್ನು ನೀಡಬೇಕು. ಮನೆಯಲ್ಲಿ ತರಬೇತಿ ನೀಡುವ ಪ್ರತಿಯೊಂದು ಮಗುವು ಅನನ್ಯ. ಹಾಗಾಗಿ ತರಬೇತಿ ಕಾರ್ಯಕ್ರಮವು ಪ್ರತಿ ಮಗುವಿನ ಸ್ಥಿತಿ ಹಾಗೂ ಅಗತ್ಯಕ್ಕನುಗುಣವಾಗಿ ಇರಬೇಕಾಗುತ್ತದೆ. ನಿಮ್ಮ ನ್ಯೂನತೆಯುಳ್ಳ ಮಗುವಿನ ಗೃಹತರಬೇತಿ ಕಾರ್ಯಕ್ರಮಗಳನ್ನು ಎರಡು ನಿಟ್ಟಿನಲ್ಲಿ ಯೋಜಿಸಿ ರೂಪಿಸಲಾಗಿದೆ:

1. ವರ್ತನಾ ನ್ಯೂನತಾ ನಿವಾರಣಾ ಕಾರ್ಯ ತಂತ್ರ
2. ಕೌಶಲತರಬೇತಿ ಕಾರ್ಯತಂತ್ರ

ಬೆಳವಣಿಗೆಯಲ್ಲಿ ನ್ಯೂನತೆಯುಳ್ಳ ಎಲ್ಲಾ ಮಕ್ಕಳಿಗೂ ಮನೆಯಲ್ಲೇ ಕೌಶಲತರಬೇತಿ ಕಾರ್ಯಕ್ರಮ ಅಗತ್ಯವಾಗಿರುತ್ತದೆ. ಜೊತೆಗೆ ವರ್ತನಾ ತೊಂದರೆಯುಳ್ಳ ಮಕ್ಕಳಿಗೆ ವರ್ತನಾ ನಿವಾರಣಾ ಕಾರ್ಯತಂತ್ರವೂ ಸಹ ಅತ್ಯಗತ್ಯ.

## ವರ್ತನಾತೊಂದರೆ ನಿವಾರಣಾ ಕಾರ್ಯತಂತ್ರ

ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳ ವರ್ತನಾ ತೊಂದರೆಗಳನ್ನಳೆಯುವ ವೈಜ್ಞಾನಿಕ ಆಧಾರಿತ ಹಲವಾರು ಸಾಧನಗಳು ನಮ್ಮ ದೇಶದಲ್ಲಿ ದೊರೆಯುತ್ತವೆ. ಪೋಷಕರಿಗೆ ತ್ರಾಸದಾಯಕವಾಗುವ ಚಟುವಟಿಕೆಗಳನ್ನು ವರ್ತನಾತೊಂದರೆಗಳೆಂದು ಪರಿಗಣಿಸಲಾಗುತ್ತದೆ. ಅವು ಅನಪೇಕ್ಷಣೀಯವೂ ಮತ್ತು ಮಗುವಿಗೂ ಇತರರಿಗೂ ಅಪಾಯಕಾರಿಯೂ ಆಗಬಲ್ಲವು. ಅವುಗಳು ಸಾಮಾಜಿಕವಾಗಿ ಹಾಗೂ ಮಗುವಿನ ವಯಸ್ಸು ಹಾಗೂ ಬೆಳವಣಿಗೆಯ ಮಟ್ಟಕ್ಕೆ ಅಸಮಂಜಸವಾಗಿರಲೂಬಹುದು. ಈ ವರ್ತನೆಗಳು ಗೃಹತರಬೇತಿ ಅಥವಾ ಶಾಲಾಶಿಕ್ಷಣ ತರಬೇತಿ ವಿಧಾನಗಳಲ್ಲಿ ಅಡ್ಡಿಯುಂಟುಮಾಡಬಹುದು.

ಈ ವರ್ತನಾ ತೊಂದರೆಗಳ ಕೆಲವು ಉದಾಹರಣೆಗಳೆಂದರೆ, ಮಗುವು ಬೇರೆಯವರನ್ನು ಹೊಡೆಯುವುದು, ಹೆಚ್ಚಾಗಿ ಅಳುವುದು, ಚಂಡಿ ಅಥವಾ ಹಠಮಾರಿತನ, ವಸ್ತುಗಳನ್ನು ಎಸೆಯುವುದು ಇತ್ಯಾದಿ. ಮಕ್ಕಳಲ್ಲಿ ಸಾಮಾನ್ಯವಾಗಿ ಕಂಡುಬರುವ ವರ್ತನಾ ತೊಂದರೆಗಳನ್ನು ಗುರುತಿಸಲು ಉಪಯುಕ್ತವಾದ ಒಂದು ವೈಜ್ಞಾನಿಕ ಆಧಾರಿತ ಸಾಧನ BASIC-MR, Part B (Peshawaria & Venkatesan, 1992) ಎಂಬುದು. ಇದರಲ್ಲಿ ಮಕ್ಕಳಲ್ಲಿ ಸಾಮಾನ್ಯವಾಗಿ ಕಂಡುಬರುವ ೭೫ ವಿವಿಧ ವರ್ತನಾ ತೊಂದರೆಗಳನ್ನು ಪಟ್ಟಿಮಾಡಲಾಗಿದೆ. ಈ ವರ್ತನಾ ತೊಂದರೆಗಳನ್ನು ಒಂಬತ್ತು ಶೀರ್ಷಿಕೆಗಳಡಿಯಲ್ಲಿ ವಿಂಗಡಿಸಲಾಗಿದೆ. ಆ ಶೀರ್ಷಿಕೆಗಳು ಹೀಗಿವೆ: ಹಿಂಸಾತ್ಮಕ ಹಾಗೂ ವಿನಾಶಕಾರೀ ವರ್ತನೆಗಳು (ಉದಾ : ಒದೆಯುವುದು, ತಳ್ಳುವುದು, ಇತ್ಯಾದಿ), ಚಂಡಿಹಿಡಿಯುವುದು (ಉದಾ : ಕಿರುಚುವುದು, ಹೆಚ್ಚಾಗಿ ಅಳುವುದು, ನೆಲದಮೇಲೆ ಹೊರಳಾಡುವುದು ಇತ್ಯಾದಿ), ಅಸಭ್ಯ ವರ್ತನೆ (ಉದಾ : ವಸ್ತುಗಳನ್ನು ಕಸಿದುಕೊಳ್ಳುವುದು, ಕೆಟ್ಟಮಾತಿನ ಬಳಕೆ ಇತ್ಯಾದಿ) ಸ್ವಹಿಂಸಾತ್ಮಕವರ್ತನೆ (ಉದಾ : ತಲೆ ಚಚ್ಚಿಕೊಳ್ಳುವುದು, ಕಚ್ಚಿಕೊಳ್ಳುವುದು, ಹೊಡೆದುಕೊಳ್ಳುವುದು ಇತ್ಯಾದಿ), ಪುನರಾವರ್ತನೆಗಳು (ಉದಾ : ಶರೀರವನ್ನು ತೂಗಾಡಿಸುವುದು, ಬೆರಳು ಚೀಪುವುದು ಇತ್ಯಾದಿ), ವಿಲಕ್ಷಣವರ್ತನೆ (ಉದಾ : ತನ್ನಷ್ಟಕ್ಕೆ ತಾನೇ ನಗುವುದು, ಬೇಡದ ವಸ್ತುಗಳನ್ನು ಶೇಖರಿಸುವಿಕೆ ಇತ್ಯಾದಿ), ಅತಿ ಚಟುವಟಿಕೆಯಿಂದ ಕೂಡಿದ ಪ್ರತಿಭಟನೆ (ಉದಾ : ಕುಳಿತಲ್ಲಿ ಕೂರದಿರುವುದು,

ಹೇಳಿದ್ದಕ್ಕೆ ವಿರುದ್ಧವಾಗಿ ವರ್ತಿಸುವುದು ಇತ್ಯಾದಿ), ಸಮಾಜ ವಿರೋಧಿ ವರ್ತನೆಗಳು (ಉದಾ : ಸುಳ್ಳು ಹೇಳುವುದು, ಕದಿಯುವುದು ಇತ್ಯಾದಿ) ಮತ್ತು ಭಯಪಡುವುದು (ಉದಾ : ಪ್ರಾಣಿಗಳು, ಮನುಷ್ಯರು, ಇತ್ಯಾದಿಗಳ ಬಗ್ಗೆ ಭಯ)

ಯಾವುದೇ ಮಗುವಿಗೆ ಗೃಹತರಬೇತಿ ಕಾರ್ಯಕ್ರಮವನ್ನು ರೂಪಿಸುವ ಮೊದಲು ಈ ಪಟ್ಟಿಯ ಸಹಾಯದಿಂದ ಮಗುವಿನಲ್ಲಿರುವ ವರ್ತನಾ ತೊಂದರೆಗಳನ್ನು ಗುರುತಿಸಿಕೊಳ್ಳಬೇಕು. ಮಗುವಿನಲ್ಲಿ ಒಂದಕ್ಕಿಂತ ಹೆಚ್ಚಾದ ವರ್ತನಾ ತೊಂದರೆಗಳು ಕಂಡುಬಂದಲ್ಲಿ ಪೋಷಕರು ವರ್ತನಾನಿವಾರಣಾ ಕಾಯತಂತ್ರವನ್ನೂ ಗೃಹತರಬೇತಿ ಆಧಾರಿತ ತರಬೇತಿ ಕಾರ್ಯಕ್ರಮದಲ್ಲೂ ಆದ್ಯತೆಯ ಮೇರೆಗೆ ರೂಪಿಸಿಕೊಳ್ಳಬೇಕು. ಈ ಕೈಪಿಡಿಯ ಕೊನೆಯಲ್ಲಿ ನೀಡಲಾಗಿರುವ ಉಪಯುಕ್ತ ಪುಸ್ತಕಗಳನ್ನು ಪೋಷಕರು ವರ್ತನಾ ತೊಂದರೆಗಳನ್ನು ಗುರುತಿಸಲು ಹಾಗೂ ತರಬೇತಿ ಯೋಜನೆಗಳನ್ನು ರೂಪಿಸಲು ಅವಲೋಕಿಸಬೇಕು.

## ಕೌಶಲ ತರಬೇತಿ ಕಾರ್ಯಕ್ರಮ

ಮಗುವು ತನ್ನ ಸುತ್ತಲಿನ ವಾತಾವರಣಕ್ಕೆ ಯಶಸ್ವಿಯಾಗಿ ಹೊಂದಿಕೊಳ್ಳಲು ಅಗತ್ಯವಿರುವ ವರ್ತನೆಗಳ ಬಗ್ಗೆ ತರಬೇತಿ ಕೊಡುವ ವಿಧಾನವೇ ಕೌಶಲ ತರಬೇತಿ ಕಾರ್ಯಕ್ರಮ. ಕೌಶಲ ವರ್ತನೆಗಳೆಂದರೆ ಪ್ರತಿಯೊಂದು ಮಗುವಿಗೂ ಕಲಿಸಲೇಬೇಕಾದ ಸಕಾರಾತ್ಮಕ ಅಥವಾ ಅಪೇಕ್ಷಣೀಯ ವರ್ತನೆಗಳು. ಉದಾಹರಣೆಗೆ : ಮಕ್ಕಳೇ ಅವರ ಉಡುಪನ್ನು ಧರಿಸುವುದು ಹಾಗೂ ಕಳಚುವುದು, ಪೂರ್ಣವಾಕ್ಯಗಳನ್ನು ಬಳಸಿ ಸಂಭಾಷಿಸುವುದು, ಚಲನೆಯ ಚಟುವಟಿಕೆಗಳಾದ ನೆಗೆತ, ಹಗ್ಗದ ಆಟ, ಜಿಗಿತ ಇತ್ಯಾದಿಗಳಲ್ಲಿ ತೊಡಗಿಸಿಕೊಳ್ಳುವುದು. ಈ ಪಟ್ಟಿಯಲ್ಲಿ ತಿಳಿಸಿರುವ ಚಟುವಟಿಕೆಗಳಿಗೆ ಮಿತಿ ಏನೂ ಇಲ್ಲ. ಮೊದಲೇ ಸಿದ್ಧಪಡಿಸಿದ ಇಂತಹ ಒಂದು ಬೋಧನಾತ್ಮಕ ಚಟುವಟಿಕೆಗಳ ಪಟ್ಟಿಯು ಪೋಷಕರಿಗೆ ಲಭ್ಯವಿದ್ದಲ್ಲಿ ಮಗುವು ಯಾವುದನ್ನು ಮಾಡಬಲ್ಲದು ಅಥವಾ ಮಾಡಲಾರದು ಎಂಬುದನ್ನು ನಿರ್ಣಯಿಸಲು ಸುಲಭವಾಗುತ್ತದೆ. ಅನಂತರ ಪೋಷಕರು, ಮಗುವು ಯಾವ ಚಟುವಟಿಕೆಗಳನ್ನು ಮಾಡಲಾರದೋ ಅವುಗಳನ್ನು ಗುರಿಯಾಗಿಟ್ಟು ಕೊಂಡು ಕಲಿಸಬಹುದು.

ಬೆಳವಣಿಗೆ ನ್ಯೂನತೆಯುಳ್ಳ ಮಕ್ಕಳ ಪೊಷಕರಿಗಾಗಿ ಹಲವಾರು ಕಾರ್ಯಚಟುವಟಿಕೆಗಳ ಪಟ್ಟಿಗಳು ನಮ್ಮ ದೇಶದಲ್ಲಿ ಲಭ್ಯವಿವೆ. ಅವುಗಳಲ್ಲಿ ಕೆಲವು ಚಿಕ್ಕಮಕ್ಕಳಿಗಾಗಿ ಇನ್ನು ಕೆಲವು ಬೆಳೆದ ಮಕ್ಕಳಿಗಾಗಿ ಹಾಗೂ ಇನ್ನು ಕೆಲವು ಶಾಲೆಗೆ ಹೋಗದ ಮಕ್ಕಳಿಗಾಗಿ ಇರುತ್ತವೆ. ಬೆಳವಣಿಗೆ ನ್ಯೂನತೆಯುಳ್ಳ ಶಾಲಾಪೂರ್ವ ಮಕ್ಕಳ ಚಟುವಟಿಕೆಯ ಪಟ್ಟಿ ಎಂಬುದು ಈಚೆಗೆ ವೈಜ್ಞಾನಿಕವಾಗಿ ಅಭಿವೃದ್ಧಿಪಡಿಸಲಾದ ವರ್ತನೆಯನ್ನು ನಿರ್ಧರಿಸುವ ಒಂದು ಸಾಧನವಾಗಿದೆ. ಇದರಿಂದ ಬೆಳವಣಿಗೆ ನ್ಯೂನತೆಯುಳ್ಳ ಶಾಲಾಪೂರ್ವ ಮಕ್ಕಳ ಕೌಶಲವರ್ತನೆಗಳ ಪ್ರಸ್ತುತ ಗುಣಮಟ್ಟ ಹಾಗೂ ಅದರ ಬಗ್ಗೆ ಮಾಹಿತಿಯನ್ನು ಕ್ರಮಬದ್ಧವಾಗಿ ಹಾಗೂ ಸಂಪೂರ್ಣವಾಗಿ ಪಡೆಯಬಹುದು.

ಎ.ಸಿ.ಪಿ.ಸಿ.–ಡಿ.ಡಿಯು (0-6 ವರ್ಷ) ಶೈಶವಾವಸ್ಥೆಯ, ಬಾಲ್ಯಾವಸ್ಥೆಯ (2-4 ವರ್ಷ) ಮತ್ತು ಶಾಲಾಪೂರ್ವ ಮಕ್ಕಳಿಗೆ (4-6 ವರ್ಷ) ಸೂಕ್ತವಾದುದು. ಚಟುವಟಿಕೆಗಳ ಈ ಪಟ್ಟಿಯನ್ನು ಬೆಳವಣಿಗೆಯಲ್ಲಿ ನ್ಯೂನತೆಯುಳ್ಳ ಶಾಲಾಪೂರ್ವ ಮಕ್ಕಳು ಮತ್ತು ಅದೇ ವಯಸ್ಸಿನ ಸಾಮಾನ್ಯ ಮಕ್ಕಳ ಮೇಲೆ ಪ್ರಯೋಗಿಸಿ ಸಿದ್ದಪಡಿಸಲಾಗಿರುವುದರಿಂದ, ಇದು ನ್ಯೂನತೆಯುಳ್ಳ ಮಕ್ಕಳ ಶಿಕ್ಷಣಕ್ಕೆ ಮಾರ್ಗದರ್ಶಿಯಾಗಿರುತ್ತದೆ.

ಎ.ಸಿ.ಪಿ.ಸಿ.–ಡಿ.ಡಿಯು ನಾನೂರು ಅಂಶಗಳನ್ನು ಒಳಗೊಂಡಿದೆ. ಈ ಅಂಶಗಳನ್ನು ಎಂಟು ವರ್ತನಾಕ್ಷೇತ್ರಗಳಲ್ಲಿ ಸಮಾನವಾಗಿ ವಿತರಿಸಲಾಗಿದೆ. ಅವುಗಳಾವುವೆಂದರೆ ಇಂದ್ರಿಯ, ಸಾಮಾನ್ಯ ಚಲನೆ, ಸೂಕ್ಷ್ಮಚಲನೆ, ಸಂವಹನ, ಆಟ, ಸ್ವಸಹಾಯ, ಅರಿವಿನ ಚಟುವಟಿಕೆಗಳು ಮತ್ತು ಶಿಕ್ಷಣಪೂರ್ವ ಚಟುವಟಿಕೆಗಳು. ಪ್ರತಿಯೊಂದು ಕ್ಷೇತ್ರದಲ್ಲೂ ಉದ್ದೇಶಿತವಾಗಿ ನಿರ್ದಿಷ್ಟ ಸಂಖ್ಯೆಯ 50 ಅಂಶಗಳನ್ನು ನಿಗದಿಪಡಿಸಲಾಗಿದೆ. ಪ್ರತಿಯೊಂದು ಅಂಶವನ್ನೂ ಸರಳವಾಗಿ, ಸ್ಪಷ್ಟವಾಗಿ ಪರಿವೀಕ್ಷಿಸಲು ಸಹಾಯವಾಗುವಂತೆ ಗೊಂದಲಕ್ಕೊಳಗಾಗದಂತೆ ಅರ್ಥೈಸಲು ಅನುಕೂಲವಾಗುವಂತೆ, ಗಮನಿಸಿ ಅಳೆಯಲು ಅನುಕೂಲವಾಗುವಂತೆ ರೂಪಿಸಲಾಗಿದೆ. ಪ್ರತಿಯೊಂದು ಗುಂಪಿನ/ಕ್ಷೇತ್ರದಲ್ಲಿ ಇರುವ ಅಂಶಗಳನ್ನು ಕ್ಲಿಷ್ಟತೆಗೆ ಅನುಸಾರವಾಗಿ ಕ್ರಮಬದ್ದವಾಗಿ ಪಟ್ಟಿಮಾಡಲಾಗಿದೆ. ಆದುದರಿಂದ ಮಕ್ಕಳು ಕೊನೆಯ ಹಂತದ ಅಂಶಗಳಿಂದ ಪ್ರಾರಂಭಿಕ ಹಂತದ ಅಂಶಗಳಲ್ಲಿ ಹೆಚ್ಚು ಸಾಮರ್ಥ್ಯತೋರುವ ಸಾಧ್ಯತೆಯಿದೆ.

ಎ.ಸಿ.ಪಿ.ಸಿ.–ಡಿ.ಡಿಯನ್ನು ಬಳಸುವ ವಿಧಾನದ ಸೂಚನೆಯ ಪ್ರಕಾರ ಪ್ರತಿಯೊಂದು ಮಗುವಿನ ವರ್ತನೆಯ ಚಿತ್ರಣ ದೊರೆಯುತ್ತದೆ. ಅಂದರೆ, ಮಗುವು ಏನೂ ಮಾಡಲು ಸಾಧ್ಯ, ಏನು ಮಾಡಲು ಅಸಾಧ್ಯವೆಂಬುದು ಸ್ಪಷ್ಟವಾಗುತ್ತದೆ. ಎ.ಸಿ.ಪಿ.ಸಿ.–ಡಿ.ಡಿಯಿಂದ ಪ್ರೇಕ್ಷಕರು ಮಗುವಿನ ಪ್ರಸ್ತುತ ಸಾಮರ್ಥ್ಯವನ್ನು ನಿಗದಿಪಡಿಸಿದ ನಂತರ 5 ರಿಂದ 10 ನಿಗದಿತ ಗುಣಗಳನ್ನು ಗೃಹತರಬೇತಿ ಕಾರ್ಯಕ್ರಮದಲ್ಲಿ ಅಳವಡಿಸಿಕೊಳ್ಳಬಹುದು. ಮೊದಲೇ ಹೇಳಿರುವಂತೆ ಗೃಹತರಬೇತಿ ಕಾರ್ಯಕ್ರಮದ ಮೊದಲ ಹಂತವಾಗಿ ನಿಮ್ಮ ಶಾಲಾ ಪೂರ್ವ ಮಗುವನ್ನು ಎ.ಸಿ.ಪಿ.ಸಿ.–ಡಿ.ಡಿಯ ಸಹಾಯದಿಂದ ಪರಿಶೀಲಿಸಿ.

ಎ.ಸಿ.ಪಿ.ಸಿ.–ಡಿ.ಡಿಯನ್ನು ಬಳಸಲು ಕೆಳಗೆ ಕೊಟ್ಟಿರುವ ಸೂಚನೆಗಳನ್ನು ಪಾಲಿಸಿ.

- ಪ್ರತಿ ಅಂಶವನ್ನೂ ಜಾಗರೂಕತೆಯಿಂದ ಓದಿ. ನಿಮ್ಮ ಮಗುವು ಸ್ಪಷ್ಟ ಸೂಚನೆಗಳನ್ನು ನೀಡಿದಲ್ಲಿ ನಿಗದಿತ ನಿಯಮಗಳಂತೆ ಈ ಚಟುವಟಿಕೆಯನ್ನು ಮಾಡಲು ಸಮರ್ಥನೇ ಎಂದು ಪರೀಕ್ಷಿಸಿ.
- ಒಂದು ವೇಳೆ ನಿಮ್ಮ ಮಗುವು ನೀವು ಕೊಟ್ಟ ನೇರ ಸೂಚನೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಅಸಮರ್ಥನಾದರೆ ಆಗ ನೀವು ಮಗುವಿಗೆ ಸೂಕ್ತ ಸುಳಿವನ್ನು ನೀಡಿ. ಇದು ವಯಸ್ಸಿನಲ್ಲಿ ಮಗುವು ಕಡಿಮೆ ಇದ್ದು, ಮಾಡಲಾಗದೇ ಇದ್ದ ಸಂದರ್ಭದಲ್ಲಿ ಮಾತ್ರ ಈ ರೀತಿ ಮಾಡಬಹುದಾಗಿದೆ. ಆಯಾ ಸಂದರ್ಭಕ್ಕೆ ತಕ್ಕಂತೆ ಸುಳಿವುಗಳನ್ನು ಹುಡುಕಿ ಮಗುವು ಮುಂದುವರಿಯುವುದಕ್ಕೆ ಸಹಾಯ ಮಾಡಬೇಕು.
- ಸುಳಿವುಗಳ ಮೂಲಕ ಮಗುವು ಆ ಕೆಲಸ ಮಾಡಲು ವಿಫಲನಾದಲ್ಲಿ ನೀವು ಮುಂದುವರಿದು ಆ ಕ್ರಿಯೆಯ ಬಗ್ಗೆ ಬಿಡಿಸಿ ಹೇಳಿ, ಸಹಾಯ (ದೈಹಿಕ ಪ್ರೇರೇಪಣೆ) ನೀಡಿ ಮಗುವು ವರ್ತನಾಗುರಿಯನ್ನು ಮುಟ್ಟಲು ನೆರವಾಗಬಹುದು. ಇದರಿಂದ ಗೊತ್ತಾಗುವುದೇನೆಂದರೆ, ನಿಮ್ಮ ಮಗುವು ಆ ಕಾರ್ಯ (ಅಂಶ) ವನ್ನು ಮಾಡಲು ಅಸಮರ್ಥ ಎಂದು. ಮುಂದೆ ನಿಮ್ಮ ಗೃಹತರಬೇತಿ ಕಾರ್ಯಕ್ರಮದಲ್ಲಿ ಇದನ್ನು ಹೇಳಿಕೊಡಬೇಕಾದ ವರ್ತನಾ ಗುರಿ ಎಂದು ಗುರುತಿಸಿಕೊಳ್ಳಬೇಕು.
- ಯಾವ ಕ್ರಿಯೆಯನ್ನು ಎಷ್ಟರಮಟ್ಟಿಗೆ ಸಹಾಯ ಪಡೆದು ನಿರ್ವಹಿಸಬಲ್ಲನೆಂದು ನಿಗದಿಪಡಿಸುವ ಮೊದಲು ಸಾಧ್ಯವಾದಷ್ಟೂ ನಿಮ್ಮ ಮಗುವು ಆ ಕ್ರಿಯೆಗಳನ್ನು ಮಾಡಬಲ್ಲನೆಂಬ ಸಕಾರಾತ್ಮಕ ಭಾವನೆಯಿಂದ ಮುಂದುವರಿಯಬೇಕು. ಮಗುವಿನ ಸಾಮರ್ಥ್ಯದ ಬಗ್ಗೆ ನಕಾರಾತ್ಮಕ ಭಾವನೆ ಸಲ್ಲದು.
- ನಿಮ್ಮ ಮಗುವಿನ ಸಾಮರ್ಥ್ಯವನ್ನು ಬೇರೆಯವರ ಹೇಳಿಕೆ, ಸೂಚನೆಯ ಮೇಲೆ ಅವಲಂಬಿಸದೆ ನಿಮ್ಮ ನೇರ ಪರಿವೀಕ್ಷಣೆಯ ಮೇಲೆ ದೃಢಪಡಿಸಿಕೊಳ್ಳುವುದು.
- ಎ.ಸಿ.ಪಿ.ಸಿ.–ಡಿ.ಡಿಯನ್ನು ಬಳಸಿ ನಡೆಸುವ ಪರೀಕ್ಷೆಯನ್ನು ಒಂದೇ ಸಲಕ್ಕೆ ಮುಗಿಸಬೇಕೆಂಬ ನಿಯಮವೇನಿಲ್ಲ. ಮಗುವು ಕೊಡುವ ಸಹಕಾರಕ್ಕನುಸರಿಸಿ, ಅದನ್ನು ಹಲವು ವಿಧಾನಗಳಲ್ಲಿ, ದಿನಗಳಲ್ಲಿ ನಡೆಸುವ ಸತತ ವೀಕ್ಷಣೆಗಳ ಮೇಲೆ ಆಧರಿಸಿ ನಿರ್ಧರಿಸಬೇಕಾಗುತ್ತದೆ. ಮಗುವಿನ ನೇರ ವೀಕ್ಷಣೆಗಳ ಮೇಲೆ ಆಧರಿಸಿ ಇದನ್ನು ನಿರ್ಧರಿಸಬೇಕಾಗುತ್ತದೆ. ಮಗುವಿನ ನೇರ ವೀಕ್ಷಣೆಯಿಂದ ದೊರಕದ ಮಾಹಿತಿಯನ್ನು ಬೇರೆಯವರ ಸಹಾಯದಿಂದ ಪಡೆಯಬಹುದು. ಎ.ಸಿ.ಪಿ.ಸಿ.–ಡಿ.ಡಿಯ ಪಟ್ಟಿಯಲ್ಲಿರುವ ಪ್ರತಿಯೊಂದು ಅಂಶದಲ್ಲೂ ಮಗುವಿನ ಅತ್ಯಂತ ಗರಿಷ್ಠ ಸಾಮರ್ಥ್ಯವನ್ನು ಅಳೆಯಲು ಬೇಕಾದ ಎಲ್ಲಾ ಪ್ರಯತ್ನಗಳನ್ನೂ ಮಾಡಬೇಕು.
- ಎ.ಸಿ.ಪಿ.ಸಿ.–ಡಿ.ಡಿಯ ಎಲ್ಲಾ 400 ಅಂಶಗಳಲ್ಲೂ ಮಗುವಿಗೆ ತರಬೇತಿ ನೀಡಲೇ ಬೇಕೆಂದೇನೂ ಇಲ್ಲ. ಯಾವುದೇ ಕ್ಷೇತ್ರದ ಅಂಶಗಳನ್ನು ಗುರುತಿಸುತ್ತಾ ಹೋಗಿ, ಐದು ಸತತ ಅಂಶಗಳಲ್ಲಿ ಸಫಲನಾಗದಿದ್ದರೆ, ಅದನ್ನು ಮುಂದುವರೆಸುವ ಅವಶ್ಯಕತೆಯಿಲ್ಲ. ಅಲ್ಲಿಗೆ ನಿಲ್ಲಿಸಿ. ಆ ಮೇಲೆ ಪಟ್ಟಿಯಲ್ಲಿನ ಬೇರೆ ಕ್ಷೇತ್ರವನ್ನು ಬಳಸಿ ಮುಂದುವರಿಸಿ. ಸತತವಾಗಿ ಐದು ಅಂಶಗಳಲ್ಲಿ ಅಸಫಲನಾದ ಮೇಲೆ ಮುಂದಿನ ಯಾವುದೇ ಅಂಶದಲ್ಲಿ ಸಫಲತೆಗಳಿಸುವ ಸಾಧ್ಯತೆ ಇರುವುದಿಲ್ಲ. ಆದ್ದರಿಂದ ಆ ಕ್ಷೇತ್ರದಲ್ಲಿ ಇನ್ನುಳಿದ ಚಟುವಟಿಕೆಗಳಲ್ಲಿ ಸಫಲತೆಗಳಿಸುವ ಸಾಧ್ಯತೆ ಇರುವುದಿಲ್ಲ. ಆದ್ದರಿಂದ ಈ ಕ್ಷೇತ್ರದ ಇನ್ನುಳಿದ ಅಂಶಗಳನ್ನು ಪರೀಕ್ಷಿಸುವ ಅಗತ್ಯವಿರುವುದಿಲ್ಲ. ಅವುಗಳಲ್ಲಿ ಅಸಫಲನೆಂದು ಪರಿಗಣಿಸಬಹುದು. ಯಾವಾಗಲೂ ಮಗುವಿನ ವಯಸ್ಸಿಗಿಂತ ಕೆಳಗಿನ ಹಂತದಿಂದ ಪ್ರಾರಂಭಿಸಿ ಪ್ರತಿ ಕ್ಷೇತ್ರದಲ್ಲಿ ಸತತ ಐದು ಅಂಶಗಳಲ್ಲಿ ಅಸಫಲನಾಗುವ ತನಕ ಮುಂದುವರೆಯಬೇಕು. ಎ.ಸಿ.ಪಿ.ಸಿ.–ಡಿ.ಡಿಯ ಪ್ರತಿ ಕ್ಷೇತ್ರದಲ್ಲೂ ಅಂಶಗಳನ್ನು ಮಕ್ಕಳ ಬೆಳವಣಿಗೆಯ ವಯಸ್ಸಿಗನುಗುಣವಾಗಿ ಕೊಡಲಾಗಿದೆ. ಈ ಪಟ್ಟಿಯ ಪ್ರತಿಯೊಂದು ಕ್ರಿಯೆಯನ್ನೂ ಮಗು ಮಾಡಬಹುದಾದ ವಯಸ್ಸಿನ ಗತಿ 1 ತಿ (ಒಂದು ತಿಂಗಳು) 2 ತಿ (2 ತಿಂಗಳು), 24 ತಿ (24 ತಿಂಗಳು) ಇತ್ಯಾದಿಯಾಗಿ ಗುರುತಿಸಲಾಗಿದೆ.

- ಎ.ಸಿ.ಪಿ.ಸಿ.–ಡಿ.ಡಿಯಲ್ಲಿ ನಿಮ್ಮ ಮಗುವಿನ ಸಾಮರ್ಥ್ಯವನ್ನು ಅಳೆದ ನಂತರ, ನಂತರದ ಮೌಲ್ಯಮಾಪನಕ್ಕೆ ಸಹಾಯವಾಗುವಂತೆ ಒಂದು ಅಂಕಪಟ್ಟಿಯಲ್ಲಿ ಗುರುತು ಮಾಡಿಕೊಳ್ಳಿ. ನಿಮ್ಮ ಮಗುವು ಮಾಡಲಾಗುವ / ಮಾಡದೇ ಇರುವ ಚಟುವಟಿಕೆಗಳ ದೊಡ್ಡ ವಿಷದವಾದ ಪಟ್ಟಿ ತಯಾರಾದ ನಂತರ ತತ್ಕ್ಷಣದ ತರಬೇತಿ ಕಾರ್ಯಕ್ರಮಕ್ಕೆ 3–5 ಗುರಿಗಳನ್ನು ಗೊತ್ತುಮಾಡಿಕೊಳ್ಳಿ. ನಿಮ್ಮ ಮಗುವು ಯಶಸ್ವಿಯಾಗಿ ಮಾಡದೇ ಇರುವ ಕ್ರಿಯೆಗಳು ಹಲವಾರು ಇರಬಹುದು. ಹಾಗಾಗಿ, ನೀವು ಹೆಚ್ಚು ಹೆಚ್ಚು ಅಂಶಗಳನ್ನು ಒಮ್ಮೆಗೇ ನಿಮ್ಮ ಗುರಿಯಲ್ಲಿ ಅಳವಡಿಸಿಕೊಳ್ಳಲು, ಹಾತೊರೆಯಬಹುದು. ಆದರೆ ದಯವಿಟ್ಟು ಇದಕ್ಕೆ ತಲೆ ಕೆಡಿಸಿಕೊಳ್ಳುವ ಅಗತ್ಯವಿಲ್ಲ. ಕೆಲವು ಗುರಿಗಳನ್ನು ಆರಿಸಿಕೊಂಡು ನಿಧಾನವಾಗಿ, ಆದರೆ ಸ್ಥಿರವಾಗಿ ಒಂದು ಅಂಶದಿಂದ ಮತ್ತೊಂದಕ್ಕೆ ಮುಂದುವರಿಯಿರಿ. ನಿಮ್ಮ ಮಗುವು ನಿಧಾನವಾಗಿ ಆದರೆ ಖಡಾಖಂಡಿತವಾಗಿ ಪಟ್ಟಿಯ ಬಹಳಷ್ಟು ಅಂಶಗಳನ್ನು ಕಲಿಯುವ ಸಾಧ್ಯತೆ ಉಂಟು

## ಆಟಿಕಾ ಸಾಮಗ್ರಿ (The Toy Kit)

ಎ.ಸಿ.ಪಿ.ಸಿ.–ಡಿ.ಡಿ ಯ ಹಲವಾರು ಚಟುವಟಿಕೆಗಳನ್ನು ಸೂಕ್ತವಾದ ಆಟಿಕೆಗಳಿಲ್ಲದೆ ನಿಮ್ಮ ಮಗುವಿಗೆ ಕಲಿಸಲು ಸಾಧ್ಯವಾಗುವುದಿಲ್ಲ. ಉದಾಹರಣೆ : ಎರಡು ಬೆರಳಿನಿಂದ ಹಿಡಿಯುವುದು, (Finger Grasp FM#11) ಕಲ್ಲುಗಳು, ಬಟಾಣಿಕಾಳು, ಸೂಜಿ, ಕಪ್ಪೇಚಿಪ್ಪು–ಮುಂತಾದ ವಸ್ತುಗಳ ಚಟುವಟಿಕೆಯನ್ನು ಕಲಿಸುವುದು ಅತ್ಯಾವಶ್ಯಕ. ಮತ್ತೊಂದು ಚಟುವಟಿಕೆಯಾದ ಮಣಿ ಪೋಣಿಸುವಿಕೆಯ (FM #21) ಚಟುವಟಿಕೆಗೆ ದಾರ, ತಂತಿ, ವಿವಿಧ ಅಳತೆಯ ಮಣಿಗಳು, ಸೂಜಿ ಮುಂತಾದ ವಸ್ತುಗಳು ಬೇಕಾಗುತ್ತವೆ. ಆಟಿಕಾ ಸಾಮಗ್ರಿಯ ಪ್ರತಿಯೊಂದು ಆಟಿಕೆಗೂ ಒಂದು ಚಿಹ್ನೆಯನ್ನು ನೀಡಲಾಗಿದೆ. ಉದಾಹರಣೆ : ಆಟಿಕಾ ಸಾಮಗ್ರಿಯ ಶಿಶು ಘಟಕದಲ್ಲಿನ ನಾಲ್ಕು IV-I ಎಂದರೆ ಮೊದಲನೆ ವಸ್ತುವಾದ Pen Torch : TV ಎಂದರೆ ಬಾಲ್ಯಾವಧಿರೂಪ – ಮತ್ತು PV ಎಂದರೆ ಶಾಲಾಪೂರ್ವರೂಪ

ಹಲವು ಬಾರಿ ಪೋಷಕರು ಈ ಪಟ್ಟಿಗೆ ಅನುಸಾರವಾಗಿ ಚಟುವಟಿಕೆಗಳನ್ನು ಕಲಿಸಲು ಬೇಕಾದ ಆಟಿಕಾ ಸಾಮಗ್ರಿಯ ಹುಡುಕಾಟದಲ್ಲಿ ಬಳಲುತ್ತಾರೆ. ಪೋಷಕರ ಈ ತೊಳಲಾಟವನ್ನು ನೀಗಿಸಲು ಈ ಆಟಿಕಾ ಸಾಮಗ್ರಿಯನ್ನು ಕ್ರೋಢೀಕರಿಸಿ ಸಿದ್ದಪಡಿಸಲಾಗಿದೆ. ಆಟಿಕಾ ಸಾಮಗ್ರಿಯ ಪ್ರತಿಯೊಂದು ಆಟಿಕೆಯಿಂದಲೂ ಹಲವಾರುತರದ ಚಟುವಟಿಕೆಗಳನ್ನು ಮಾಡಿಸಲು ಸಾಧ್ಯ. ಉದಾಹರಣೆ : ಒಂದು ಚಂಡಿನ ಸಹಾಯದಿಂದ ಹತ್ತು – ಹದಿನೈದಕ್ಕಿಂತ ಹೆಚ್ಚಿನ ಚಟುವಟಿಕೆಗಳನ್ನು ಚಂಡಿನ ಚಟುವಟಿಕೆಗಳ ಗುಂಪಿನಲ್ಲಿ ಪಟ್ಟಿ ಮಾಡಲಾಗಿದೆ. ಆದರೆ ನೀವು ಬಳಸುವ ಚಟುವಟಿಕೆಯ ನಿರ್ದಿಷ್ಟ ವಿಧಾನವು ನಿಮ್ಮ ಮಗುವಿನ ವಯಸ್ಸು ಹಾಗೂ ಸಾಮರ್ಥ್ಯದ ಮಟ್ಟಕ್ಕೆ ಅನುಕೂಲವಾಗಿ ಇರಬೇಕು.

## ಸಂಕಲಿತ ಆಟಿಕೆಗಳು : ಶಿಶು ಘಟಕ 0 - 2 ವರ್ಷ

ಶಿಶು ಘಟಕ (I.V) ಆಟಿಕಾ ಚೀಲವನ್ನು ಹೊರತುಪಡಿಸಿ ಒಟ್ಟು ಹದಿನೇಳು ಆಟಿಕೆಗಳು ಇವೆ. ಎರಡು ವರ್ಷಕ್ಕಿಂತ ಕೆಳಗಿನ ಶಿಶುಗಳ ತರಬೇತಿಗಾಗಿ ಈ ಆಟಿಕಾ ಸಾಮಗ್ರಿಯಲ್ಲಿರುವ ಇನ್ನೆರಡು ಆಟಿಕೆಗಳನ್ನು ಕೊಂಡು ಕೊಂಡರೆ ಒಳ್ಳೆಯದು. ಎ.ಸಿ.ಪಿ.ಸಿ.–ಡಿ.ಡಿಯಲ್ಲಿ ಆಟಿಕೆಯ ಹೆಸರು, ಅದನ್ನು ಉಪಯೋಗಿಸಬಹುದಾದ ಚಟುವಟಿಕೆ ಹಾಗೂ ಅದರ ಚಿಹ್ನೆಯನ್ನು ಈ ಕೆಳಗಿನ ಪಟ್ಟಿಯಲ್ಲಿ ನೀಡಲಾಗಿದೆ. ಉದಾಹರಣೆಗೆ : ಎ.ಸಿ.ಪಿ.ಸಿ.–ಡಿ.ಡಿಯ ಇಂದ್ರಿಯ ಶಕ್ತಿ ಕ್ಷೇತ್ರದಡಿ (Sensory Domain) ಹನ್ನೆರಡನೆ ಅಂಶ ಎಂದರೆ S 12 ಬೆಳಕಿನ ಕಡೆ ತಲೆ ತಿರುಗಿಸುವುದು ಎಂದು.

| ಕ್ರಮ ಸಂಖ್ಯೆ | ಆಟಿಕೆಯ ಹೆಸರು | ಎ.ಸಿ.ಡಿ.ಸಿ.–ಡಿ.ಡಿಯಲ್ಲಿರುವ ಸಂಬಂಧಿತ ಚಟುವಟಿಕೆಗಳು |
|---|---|---|
| 1. | ಪೆನ್ ಟಾರ್ಚ್ | ಇ 12, ಇ 15 |
| 2. | ಘಂಟೆ | ಇ 4, ಇ 13, ಇ 17, ಸಂ 2 |
| 3. | ಪುಸ್ತಕ | ಸಾ 28, ಸೂ 13 |
| 4. | ಬಣ್ಣದ ಬಳೆಗಳು | ಇ 11 |
| 5. | ಮುಖವಾಡ | ಇ 18 |
| 6. | ಕನ್ನಡಿ | ಇ 22, ಸೂ 10 |
| 7. | ಎರಡು ಬೆರಳುಗಳನ್ನು ಉಪಯೋಗಿಸಿ ಎತ್ತುವ ಧಾನ್ಯಗಳು | ಸೂ 11, ಸೂ 15, ಸೂ 19 |
| 8. | ಪ್ಲಾಸ್ಟಿಕ್ ಚಂಡು | ಸಾ 18, ಸಾ 20, ಆ 3 |
| 9. | ಪ್ಲಾಸ್ಟಿಕ್ ನಿಪ್ಪಲ್ | ಇ 1 |
| 10. | ಡಮರುಗ | ಇ 13, ಸೂ 9, ಸಂ 2 |
| 11. | ಸೋಪಿನ ಕವರ್ ಮತ್ತು ಊದುಬತ್ತಿಗಳು | ಇ 26 |
| 12. | ಟೆಡ್ಡಿ ಬೇರ್ | ಆ 17 |
| 13. | ಕಚ್ಚುವ ಕ್ರಿಯೆಗೆ ಪ್ರಚೋದಿಸಿದ ವಸ್ತು | ಇ 1 |
| 14. | ಆಟಿಕೆಯ ಡ್ರಂ | ಸಾ 29, ಆ 1, ಇ 13, ಇ 28, ಸಂ 2, ಸಂ 10 |
| 15. | ಆಟಿಕೆಯ ವಾಹನಗಳು | ಸೂ 14, ಆ 17 |
| 16. | ಜೈಲೋ ಫೋನ್ | ಸಂ 2 |
| 17. | ಬಣ್ಣದ ಗಿರಿಗಟ್ಟಲೆ | ಇ 16, ಸೂ 5 |
| | ಆಟದ ಪೆಟ್ಟಿಗೆ | |
| 18. | ತೊಟ್ಟಿಲು* | ಸಾ 8 |
| 19. | ತೂಗುವ ಮರದ ಕುದುರೆ * | ಇ 36 |

*ಈ ಚಿಹ್ನೆಯಿರುವ ಆಟದ ಸಾಮಾನುಗಳನ್ನು ಆಟದ ಪೆಟ್ಟಿಗೆಯಲ್ಲಿ ಸೇರಿಸಿಲ್ಲ ಅವುಗಳನ್ನು ಹೊರಗಡೆಯಿಂದ ಕೊಂಡುಕೊಳ್ಳಬೇಕು.

## ಸಂಕಲಿತ ಆಟಿಕೆಗಳು : ಬಾಲ್ಯ ಘಟಕ 2 - 4 ವರ್ಷಗಳು

ಈ ಸಂಕಲಿತ ಆಟಿಕೆಗಳ ಬಾಲ್ಯ ಘಟಕದಲ್ಲಿ ೩೧ ವಸ್ತುಗಳಿವೆ. ಇದರಲ್ಲಿ ಕಿಟ್ ಬ್ಯಾಗ್ ಸೇರಿರುವುದಿಲ್ಲ. ಕೆಳಗಿನ ಪಟ್ಟಿಯಲ್ಲಿ ಆಟಿಕೆಗಳ ಹೆಸರುಗಳನ್ನು ಕೊಡಲಾಗಿದೆ. ಎ.ಸಿ.ಪಿ.ಸಿ.–ಡಿ.ಡಿಯ ಪ್ರಕಾರ ಇವುಗಳಲ್ಲಿ ಯಾವ ಆಟಿಕೆಯನ್ನು ಯಾವುದಕ್ಕೆ ಉಪಯೋಗಿಸಬಹುದೆಂಬುದರ ಬಗೆಗೆ ಒಂದೊಂದು ಸಂಕೇತವನ್ನು ಕೊಡಲಾಗಿದೆ. ಉದಾಹರಣೆಗೆ, ಎಸ್ ೧೨ ಎಂಬುದು ಎ.ಸಿ.ಪಿ.ಸಿ.–ಡಿ.ಡಿಯ ಜ್ಞಾನೇಂದ್ರಿಯ ಕ್ಷೇತ್ರದಲ್ಲಿ ೧೨ನೇ ಅಂಶ (ತಲೆಯನ್ನು ಬೆಳಕಿನ ಕಡೆಗೆ ತಿರುಗಿಸುತ್ತದೆ) – ಎಂಬುದನ್ನು ಸೂಚಿಸುತ್ತದೆ.



ಇಂದ್ರಿಯ ೩೪ : ಕಣ್ಣುಗಳಿಂದ ವೀಕ್ಷಿಸುವ
ಉಪಕರಣಗಳನ್ನು ಬಳಸಿ ನೋಡುವುದು



ಇಂದ್ರಿಯ ೩೫ : ಶಬ್ದ ಮಾಡುವ ವಸ್ತುಗಳ ಕಡೆಗೆ ಗಮನಿಸುವುದು



ಸಾಮಾನ್ಯ ಚಲನೆ ೩೬ : ಆಟ ಆಡುವ ತೂಯುವ
ಮರದ ಕುದುರೆಯ ಮೇಲೆ ಕೂರುವುದು



ಸಾಮಾನ್ಯ ಚಲನೆ ೭ : ಕುಳಿತಿರುವುದರಿಂದ ನಿಲ್ಲುವ ಸ್ಥಿತಿಗೆ ಜಗಿಯುವುದು
ಇಲ್ಲದಿದ್ದರೆ ನಿಂತಿರುವುದರಿಂದ ಕೂರುವುದು



ಸಾಮಾನ್ಯ ಚಲನೆ ೧೮ : ಚೆಂಡನ್ನು ನಿರ್ದಿಷ್ಟವಾದ ಜಾಗದೆಡೆಗೆ ತಳ್ಳುವುದು



ಸಾಮಾನ್ಯ ಚಲನೆ ೨೩ : ಬಸ್ಕಿ ಹೊಡೆಯುವುದು



ಸಾಮಾನ್ಯ ಚಲನೆ ೨೪ : ಒಂದು ಅಡಿ ಎತ್ತರ ನೆಗೆಯುವುದು



ಸಾಮಾನ್ಯ ಚಲನೆ ೨೭ : ಒಂಟಿ ಕಾಲಿನಲ್ಲಿ ಸಮತೋಲನವಾಗಿ ನಿಲ್ಲುವುದು

| ಕ್ರಮ ಸಂಖ್ಯೆ | ಆಟಿಕೆಯ ಹೆಸರು | ಎ.ಸಿ.ಡಿ.ಸಿ.–ಡಿ.ಡಿಯಲ್ಲಿರುವ ಸಂಬಂಧಿತ ಚಟುವಟಿಕೆಗಳು |
|---|---|---|
| 1. | ದುರ್ಬೀನ್ | ಇ 34 |
| 2. | ಬೂದುಗನ್ನಡಿ | ಇ 34 |
| 3. | ಈಯರ್ ಫೋನ್ | ಇ 35 |
| 4. | ಸ್ಪರ್ಶಕಂಬಳಿ | ಇ 42 |
| 5. | ಈಫ್ | ಸೂ 24 |
| 6. | ವಿವಿಧ ಆಕಾರದ ಗುಂಡಿಯ ಸರಮಾಲೆ | ಸ್ವಸ 24, ಸ್ವಸ 26, ಸ್ವಸ 28 |
| 7 | ದಾರ | ಸ್ವಸ 32, ಸೂ 38 |
| 8. | ಬೀಗ ಮತ್ತು ಬೀಗದ ಕೈ | ಸೂ 23, ಸೂ 39 |
| 9. | ನಟ್ ಮತ್ತು ಬೋಲ್ಟ್‌ಗಳು | ಸೂ 18 |
| 10. | ಮುಚ್ಚಳವಿರುವ ಬಾಟಲಿಗಳು | ಸೂ 15, ಸೂ 16, ಸೂ 18, ಸೂ 19, ಸೂ 26 |
| 11. | ದಾರ/ವೈರ್ ಮತ್ತು ಮಣಿಗಳು | ಸೂ 21, ಆ 8 |
| 12. | ದಬ್ಬಳ | ಸೂ 21, ಸೂ 46 |
| 13. | ಗೋಲಕ | ಸೂ 22 |
| 14. | ರಬ್ಬರ್ ಬ್ಯಾಂಡ್ | ಸೂ 28 |
| 15. | ಹರಿಯಲು ಸುಲಭವಾಗುವಂತೆ ರಂಧ್ರಗಳಿರುವ ಹಾಳೆಗಳು (ಕಾಗದ) | ಸೂ 40 |
| 16. | ಸ್ಪಂಜು | ಸೂ 48 |
| 17. | ಸ್ಥಿರ ಚಿತ್ರಗಳು ಅಧ್ಯ 8, ಅಧ್ಯ 9 | ಸಂ 18, ಸಂ 19, ಅಧ್ಯ 3, ಅಧ್ಯ 7, |
| 18. | ಕ್ರಿಯಾ ಸೂಚಕ ಚಿತ್ರಗಳು | ಸಂ 42, ಅರಿ 36, ಅಧ್ಯ 11 |
| 19. | ಕ್ಲಿಷ್ಟ ಆಟದ ಸಾಮಗ್ರಿಗಳು (ಎರಡು ಮೂರು ಜಿಗ್ ಜಾಗ್ ಫಜಲ್ ತುಂಡುಗಳು) | ಸೂ 30, ಸೂ 33 |
| 20. | ಆಟದ ಫೋನ್ | ಸಂ 39, ಇ 13, ಇ 35 |
| 21. | ಮೇಣದ ಬತ್ತಿ | ಇ 45, ಸ್ವಸ 12 |
| 22. | ಬಲೂನ್ | ಇ 45 |
| 23. | ಶಿಲ್ಪಿ | ಆ 18 |
| 24. | ಮೌತ್ ಆರ್ಗನ್ | ಆ 18 |
| 25. | ಊಪಿ * | ಸ್ವಸ 14 |
| 26. | ಆಟದ ವಾಹನ | ಸೂ 14 |
| 27. | ಆಟದ ಚೆಂಡು ಮತ್ತು ದಾಂಡು | ಸಾ 32, ಸಾ 18, ಸಾ 20, ಸಾ 47, ಸಾ 49, ಸಂ 14 |

| | | |
|---|---|---|
| 28. | ವಿವಿಧ ಅಳತೆಯ ವಸ್ತುಗಳನ್ನು ಬೇರ್ಪಡಿಸುವ ಸಾಮಗ್ರಿಗಳು | ಇ 40, ಎ 47, ಅರಿ 35, ಅಧ್ಯ 26 |
| 29. | ವಿವಿಧ ಆಕಾರಗಳನ್ನು ಬೇರ್ಪಡಿಸುವ ಸಾಮಗ್ರಿಗಳು | ಇ 38, ಅಧ್ಯ 26 |
| 30. | ವಿವಿಧ ಬಣ್ಣಗಳನ್ನು ಬೇರ್ಪಡಿಸುವ ಸಾಮಗ್ರಿಗಳು | ಇ 41, ಅರಿ 44, ಅರಿ 50, ಅಧ್ಯ 26 |
| 31. | ಸ್ಪರ್ಶ ಕಂಬಳಿ | ಇ 42 |
| | ಆಟದ ಪೆಟ್ಟಿಗೆ | |
| 32. | * ಮೂರು ಚಕ್ರದ ಸೈಕಲ್ | ಆ 35 |
| 33. | * ಕನ್ನಡಿ ಕೊಳವೆ (ಕಲಿಡಿಯೋ/ಸ್ಕೋಪ್) | ಇ 34 |
| 34. | * ತೂಯುವ ಮರದ ಕುದುರೆ | ಇ 36 |

** ಈ ಚಿಹ್ನೆಯಿರುವ ಆಟದ ಸಾಮಾನುಗಳನ್ನು ಆಟದ ಪೆಟ್ಟಿಗೆಯಲ್ಲಿ ಸೇರಿಸಿಲ್ಲ ಅವುಗಳನ್ನು ಹೊರಗಡೆಯಿಂದ ಕೊಂಡು ಕೊಳ್ಳಬೇಕು.*

## ಸಂಕಲಿತ ಆಟಿಕೆಗಳು : ಶಾಲಾಪೂರ್ವ ಘಟಕ: 4 - 6 ವರ್ಷಗಳು

ಈ ಸಂಕಲಿತ ಆಟಿಕೆಗಳ ಶಾಲಾಪೂರ್ವ ಘಟಕದಲ್ಲಿ 49 ವಸ್ತುಗಳಿರುತ್ತವೆ. ಇದರಲ್ಲಿ ಕಿಟ್ ಬ್ಯಾಗ್ ಸೇರಿರುವುದಿಲ್ಲ. ಕೆಳಗಿನ ಪಟ್ಟಿಯಲ್ಲಿ ಪ್ರತಿಯೊಂದು ಆಟಿಕೆಯ ಹೆಸರನ್ನೂ ಕೊಡಲಾಗಿದೆ. ಎ.ಸಿ.ಪಿ.ಸಿ.–ಡಿ.ಡಿಯ ಪ್ರಕಾರ ಯಾವ ಆಟಿಕೆಯನ್ನು ಯಾವ ಚಟುವಟಿಕೆಗೆ ಉಪಯೋಗಿಸಬಹುದೆಂದು ತೋರಿಸಲು ಪ್ರತಿಯೊಂದು ಆಟಿಕೆಯ ಹೆಸರಿನ ಮುಂದೆಯೂ ಒಂದೊಂದು ಸಂಕೇತವನ್ನು ಕೊಡಲಾಗಿದೆ. ಉದಾಹರಣೆಗೆ, ಎಸ್, 12 ಎಂಬುದು ಎ.ಸಿ.ಪಿ.ಸಿ.–ಡಿ.ಡಿಯ ಜ್ಞಾನೇಂದ್ರಿಯ ಕ್ಷೇತ್ರದಲ್ಲಿ ಇದ್ದು 12ನೇ ಅಂಶ (ತಲೆಯನ್ನು ಬೆಳಕಿನ ಕಡೆಗೆ ತಿರುಗಿಸುತ್ತಿದೆ) ಎಂಬುದನ್ನು ಸೂಚಿಸುತ್ತದೆ.

| ಕ್ರಮ ಸಂಖ್ಯೆ | ಆಟಿಕೆಯ ಹೆಸರು | ಎ.ಸಿ.ಡಿ.ಸಿ.–ಡಿ.ಡಿಯಲ್ಲಿರುವ ಸಂಬಂಧಿತ ಚಟುವಟಿಕೆಗಳು |
|---|---|---|
| 1. | ಕಣ್ಣನ್ನು ಮುಚ್ಚುವ ಬಟ್ಟೆ | ಇ 13 |
| 2. | ಸ್ಕಿಪ್ಪಿಂಗ್ ಹಗ್ಗ | ಆ 5 |
| 3. | ಉಗುರು ಕತ್ತರಿ | ಸಾ 50 |
| 4. | ಬೆಂಕಿ ಪೊಟ್ಟಣ | ಸೂ 42 |
| 5. | ಸೂಜಿ ಮತ್ತು ದಾರ | ಸೂ 46 |
| 6. | ಬಟ್ಟೆ ಪಿನ್ನು | ಸೂ 29 |
| 7. | ಅಂಟುಪಟ್ಟಿ | ಸೂ 34 |
| 8. | ಪೆನ್ಸಿಲ್ ಮತ್ತು ರಬ್ಬರ್ | ಸೂ 31 |
| 9. | ಎನ್‌ವೆಲಪ್ | ಸೂ 35 |
| 10. | ಮೆಂಡರ್ | ಸೂ 36 |
| 11. | ಬೂಟು ಕಟ್ಟುವ ದಾರ | ಸೂ 38 |

| | | |
|---|---|---|
| 12. | ಬೀಗ ಮತ್ತು ಬೀಗದ ಕೈ | ಸೂ 23 |
| 13. | ಪಂಚಿಂಗ್ ಮೆಷಿನ್ | ಸೂ 43 |
| 14. | ಸ್ಟೇಪ್‌ಲರ್ | ಸೂ 43 |
| 15. | ಪೇಪರ್ ಕ್ಲಿಪ್‌ಗಳು | ಸೂ 43 |
| 16. | ಸಮುದ್ರದ ಶಂಕು, ಕಪ್ಪೆಚಿಪ್ಪುಗಳು | ಅಧ್ಯ 36 |
| 17. | ಕತ್ತರಿ | ಸೂ 47 |
| 18. | ಸ್ಪಂಜು | ಸೂ 48 |
| 19. | ಆಟದ ಕಾರ್ಡ್ (ಇಸ್ಪೀಟ್ ಎಲೆಗಳು) | ಸೂ 49 |
| 20. | ಸೀಮೆ ಸುಣ್ಣ | ಸೂ 20, ಅಧ್ಯ 15, ಸೂ 50 |
| 21. | ಬಣ್ಣ ಬಳಿಯುವ ಬ್ರಷ್ | ಸೂ 20 |
| 22. | ಕ್ರೆಯಾನ್ಸ್ | ಸೂ 20, ಅಧ್ಯ 15 |
| 23. | ಪ್ರಾಣಿಗಳು, ವಾಹನಗಳು, ತರಕಾರಿ, ಹಣ್ಣುಗಳು–ಹೆಸರು ತೋರಿಸುವ ಕಾರ್ಡ್‌ಗಳು | ಅಧ್ಯ 3, ಅಧ್ಯ 6, ಅಧ್ಯ 7, ಅಧ್ಯ 8, ಅಧ್ಯ 9 |
| 24. | 4 ರಿಂದ 8 ಜಿಗ್ ಜಾಗ್ ಫಜಲ್ಸ್ ತುಂಡುಗಳು | ಸೂ 30, ಸೂ 33 |
| 25. | ಪಾಕೆಟ್ ಕ್ಯಾಲೆಂಡರ್ | ಅರಿ 18 |
| 26. | ನಾಣ್ಯ / ಹಣ | ಅರಿ 19, ಅರಿ 20, ಅರಿ 21, ಅರಿ 22, ಅರಿ 23, ಅರಿ 24, ಅರಿ 25, ಅರಿ 26, ಅರಿ 27, ಅರಿ 28 |
| 27. | ಮೇಣದ ಬತ್ತಿ | ಆ 28 |
| 28. | ಕೇರಂ ಬೋರ್ಡ್ | ಅರಿ 29 |
| 29. | ಲುಡೋ ಆಟದ ಸಾಮಗ್ರಿ (ಚೌಕ ಬಾರ) | ಅಧ್ಯ 36, ಅಧ್ಯ 44 |
| 30. | ಹಾವು ಏಣಿ ಆಟ | ಅಧ್ಯ 36, ಅಧ್ಯ 44 |
| 31. | ಗೋಲಿಗಳು | ಸೂ 20, ಸೂ 44 |
| 32. | ಆಟದ ಗೊಂಬೆ | ಸಂ 15 |
| 33. | ಕ್ಯಾಲ್ಕುಲೇಟರ್ | ಅಧ್ಯ 43 |
| 34. | ಅ,ಆ,ಇ,ಈ ಪುಸ್ತಕ | ಅಧ್ಯ 6, ಅಧ್ಯ ೭, ಅಧ್ಯ 8, ಅಧ್ಯ 9 |
| 35. | ಅಂಕಿ ಕಾರ್ಡ್‌ಗಳು | ಅಧ್ಯ ೧, ಅಧ್ಯ 25, ಅಧ್ಯ 33 |
| 36. | ತೂಕದ ಡಬ್ಬಿ | ಅಧ್ಯ 30 |
| 37. | ಸ್ಕೆಚ್ ಪೆನ್ | ಸೂ 20 |
| 38. | ಸಣ್ಣ ಸ್ಕೇಲ್ | ಅಧ್ಯ 16 |
| 39. | ನಕಲು ಕಾಗದ | ಅಧ್ಯ 23 |
| 40. | ಪಗಡೆ, ದಾಳ | ಅಧ್ಯ 36 |
| 41. | ಜಲ ವರ್ಣಗಳು | ಅಧ್ಯ 15 |

| | | |
|---|---|---|
| 42. | ಗಂ ಬಾಟಲ್ | ಸೂ 32 |
| 43. | ಆಟಿಕೆಯ ಅಡುಗೆ ಸಾಮಗ್ರಿ | ಆ 17, ಆ 23, ಆ 25, ಆ 28, ಆ 33, ಆ 37 |
| 44. | ಬಟ್ಟೆ ಒಣಹಾಕಲು ಉಪಯೋಗಿಸುವ ಕ್ಲಿಪ್‌ಗಳು | ಸೂ 43 |
| 45. | ಸ್ಲೇಟ್ | ಅಧ್ಯ 15, ಅಧ್ಯ 16, ಅಧ್ಯ 17, ಅಧ್ಯ 18, ಅಧ್ಯ 19 |
| 46. | ಟೇಬಲ್ ಬೆಲ್ | ಇ 4, ಇ 13, ಇ 17 |
| 47. | ಅಳತೆ ಬೇರ್ಪಡಿಸುವುದು | ಇ 40, ಇ 47, ಅರಿ 35, ಅರಿ 37, ಅಧ್ಯ 26 |
| 48. | ಆಕಾರ ಬೇರ್ಪಡಿಸುವುದು | ಇ 38, ಆ 30, ಅಧ್ಯ 26 |
| 49. | ಬಣ್ಣ ಬೇರ್ಪಡಿಸುವುದು | ಇ 41, ಅರಿ 44, ಅರಿ 50, ಅಧ್ಯ 26 |
| | ಕಿಟ್ ಬ್ಯಾಗ್ | |
| 50. | 3 ಚಕ್ರದ ಸೈಕಲ್ * | ಆ 35 |
| 51. | * ಕ್ಯಾಟರ್ ಬಿಲ್ | ಸಾ 49 |
| 52. | * ಬುಗುರಿ ಮತ್ತು ದಾರ | |

* ಈ ಚಿಹ್ನೆಯಿರುವ ಆಟದ ಸಾಮಾನುಗಳನ್ನು ಆಟದ ಪೆಟ್ಟಿಗೆಯಲ್ಲಿ ಸೇರಿಸಿಲ್ಲ ಅವುಗಳನ್ನು ಹೊರಗಡೆಯಿಂದ ಕೊಂಡುಕೊಳ್ಳಬೇಕು.

## ಬೆಳವಣಿಗೆ ನ್ಯೂನತೆಯುಳ್ಳ ಶಾಲಾಪೂರ್ವ ಮಕ್ಕಳ ಚಟುವಟಿಕೆಯ ಪಟ್ಟಿ

(ಸೂಚನೆ : ಈ ಕೆಳಗಿನ ಪಟ್ಟಿಯಲ್ಲಿ 'ತಿ' ಎಂಬುದು ತಿಂಗಳುಗಳನ್ನು ಸೂಚಿಸುತ್ತದೆ ಹಾಗೂ ಅಲ್ಲಿ ಕೊಟ್ಟಿರುವ ತಿಂಗಳುಗಳಷ್ಟು ನಿಮ್ಮ ಮಗುವಿಗೆ ವಯಸ್ಸಾಗಿದ್ದಲ್ಲಿ ನಿಮ್ಮ ಮಗುವು ಆ ಚಟುವಟಿಕೆಗಳನ್ನು ಮಾಡಬಲ್ಲನೇ ಎಂಬುದನ್ನು ಗಮನಿಸಬೇಕು
ಶಿ. ಘ. : ಶಿಶು ಘಟಕ : ಬಾ. ಘ. ಬಾಲ್ಯ ಘಟಕ : ಶಾ. ಪೂ. ಘ : ಶಾಲಾಪೂರ್ವ ಘಟಕ)

| ಸಂಖ್ಯೆ | ಇಂದ್ರಿಯ (ಇ) | ಆಟಿಕೆಯ ಸೂಚ್ಯ |
|---|---|---|
| 1 | ಬಾಯಿಯಲ್ಲಿ ಬೆರಳು/ನಿಪ್ಪಲ್ ಇಟ್ಟುಕೊಂಡು ಚೀಪುವ ಸಾಮರ್ಥ್ಯ ತೋರಿಸುವುದು. (1 ತಿ) | ಶಿ ಘ 9 |
| 2 | ಕೆನ್ನೆಯನ್ನು ಮುಟ್ಟಿದಾಗ ಕತ್ತನ್ನು ವಾಲಿಸುವುದು. (1 ತಿ) | |
| 3 | ಮೆದುವಾಗಿ ತುಟಿಯ ಮೇಲ್ಭಾಗವನ್ನು ಸ್ಪರ್ಶಿಸಿದಾಗ ತುಟಿಯನ್ನು ಮುಂದೊಡ್ಡುವುದು. (1 ತಿ) | |
| 4 | ಅತಿಯಾದ ಶಬ್ದಕ್ಕೆ ಬೆಚ್ಚುವುದು. (1 ತಿ) | ಶಿ ಘ 2, ಶಿ ಘ 10, ಶಿ ಘ 14, ಶಿ ಘ 16, |
| 5 | ಹಣೆಯನ್ನು ಮೃದುವಾಗಿ ತಟ್ಟಿದಾಗ ಕಣ್ಣುಗಳನ್ನು ಮುಚ್ಚುವುದು ಅಥವಾ ಮಿಟುಕಿಸುವುದು. (1 ತಿ) | |
| 6 | ಅಂಗೈಯನ್ನು ಸ್ಪರ್ಶಿಸಿದಾಗ /ಅದುಮಿದಾಗ ಬೆರಳುಗಳನ್ನು ಮುಚ್ಚುವುದು. (1 ತಿ) | |
| 7 | ಪಾದದ ಮೇಲ್ಭಾಗವನ್ನು ಅದುಮಿದಾಗ ಬೆರಳುಗಳನ್ನು ಮುಂಬಾಗಿಸುವುದು. (1ತಿ) | |



ಸಾಮಾನ್ಯ ಚಲನೆ ೩೦ : ತನ್ನ ಕಾಲುಗಳ ಮೂಲಕ
ಮೆಟ್ಟಿಲುಗಳನ್ನು ಹತ್ತಿ ಇಳಿಯುವುದು



ಸಾಮಾನ್ಯ ಚಲನೆ ೩೨ : ದೂರದಿಂದ
ಪೆಟ್ಟಿಗೆಗೆ ಚಂಡನ್ನು ಎಸೆಯುವುದು



ಸಾಮಾನ್ಯ ಚಲನೆ ೩೪ : ಏಣಿಯ ನಾಲ್ಕು ಐದು ಹಂತಗಳನ್ನು ಹತ್ತುವುದು



ಸಾಮಾನ್ಯ ಚಲನೆ ೩೮ : ಆಟದ ದಾಂಡಿನಿಂದ ಚಂಡನ್ನು
ಸರಿಯಾಗಿ ಹೊಡೆಯಲು ಪ್ರಯತ್ನಿಸುವುದು



ಸಾಮಾನ್ಯ ಚಲನೆ ೪೩ : ಹತ್ತು ಸೆಕೆಂಡುಗಳ ಸಮಯವಾದರೂ ಸಮವಾದ ಕಂಬಗಳನ್ನು ಹಿಡಿದು ಜೋತಾಡುವುದು



ಸಾಮಾನ್ಯ ಚಲನೆ ೫೦ : ಉಗುರು ಕತ್ತರಿಸುವುದು



ಸೂಕ್ಷ್ಮ ಚಲನೆ ೨ : ಗೋಳಾಕಾರದ ವಸ್ತುಗಳನ್ನು ಮುಷ್ಟಿಯಿಂದ ಹಿಡಿಯುವುದು



ಸೂಕ್ಷ್ಮ ಚಲನೆ ೩ : ಹಿಡಿಯನ್ನು ಹಿಡಿಯುವುದು

| | | |
|---|---|---|
| 8 | ಅಂಗಾಲನ್ನು ಆದುಮಿದಾಗ ಬೆರಳುಗಳನ್ನು ಹಿಂಬಾಗಿಸುವುದು. (1 ತಿ) | |
| 9 | ಮೇಲೆತ್ತಿ ನಿಲ್ಲಿಸಿದಾಗ, ಹೆಜ್ಜೆ ಹಾಕುವ ಪ್ರಯತ್ನವನ್ನು ತೋರಿಸುವುದು. (1 ತಿ) | |
| 10 | ಹೊಟ್ಟೆಯ ಮತ್ತು ಪಾದದ ಮುಂಭಾಗವನ್ನು ಆದುಮಿದಾಗ ಮುಂದಕ್ಕೆ ತೆವಳುವುದು. (1 ತಿ) | |
| 11 | ಬಣ್ಣದ/ಪ್ರಕಾಶಮಾನವಾದ ವಸ್ತುಗಳ ಕಡೆಗೆ ದಿಟ್ಟಿಸಿ ನೋಡುವುದು. (1 ತಿ) | ಶಿ ಫ 1, ಶಿ ಫ 4, |
| 12 | ಬೆಳಕಿನ ಕಿರಣಗಳಿಗೆ ತಲೆಯನ್ನು ತಿರುಗಿಸುವುದು. (1 ತಿ) | ಶಿ ಫ 1, |
| 13 | ಶಬ್ದದೆಡೆಗೆ ತಲೆಯನ್ನು ತಿರುಗಿಸುವುದು. (1 ತಿ) | ಶಿ ಫ 2, ಶಿ ಫ 10, ಶಿ ಫ 14, ಶಿ ಫ 16, ಶಿ ಫ 17, |
| 14 | ತನ್ನ ಬೆರಳುಗಳನ್ನು ಒಂದೇ ಸಮನೆ ದಿಟ್ಟಿಸಿ ನೋಡುವುದು. (2 ತಿ) | |
| 15 | ಚಲಿಸುತ್ತಿರುವ ಬೆಳಕನ್ನು ಹಿಂಬಾಲಿಸುವುದು. (2 ತಿ) | ಶಿ ಫ 1 |
| 16 | 6 - 8 ಇಂಚುಗಳ ದೂರದಿಂದ ಆಲುಗಾಡುವ ವಸ್ತುಗಳನ್ನು ಗುರುತು ಹಿಡಿಯುವುದು. (2 ತಿ) | ಶಿ ಫ 17 |
| 17 | ಗಂಟೆಯ ಶಬ್ದವನ್ನು ಕೇಳುವುದಕ್ಕೆ ತನ್ನ ಚಟುವಟಿಕೆಯನ್ನು ನಿಲ್ಲಿಸುವುದು. (2 ತಿ) | ಶಿ ಫ 2 |
| 18 | ಮಾನವನ ಮುಖವನ್ನೇ ಅಪೇಕ್ಷಿಸಿ ದಿಟ್ಟಿಸುವುದು. (3 ತಿ) | ಶಿ ಫ 5 |
| 19 | ಸ್ಥಿರವಾಗಿ ಕಣ್ಣಿನಿಂದ ಕಣ್ಣಿಗೆ ಸಂಪರ್ಕವನ್ನು ಮಾಡುವುದು. (3 ತಿ) | ಶಿ ಫ 5 |
| 20 | ಚಲಿಸುವಂತಹ ವಸ್ತುಗಳನ್ನು ಮತ್ತು ವ್ಯಕ್ತಿಗಳನ್ನು ಹಿಂಬಾಲಿಸುವುದು. (3 ತಿ) | ಶಿ ಫ 17 |
| 21 | ರಕ್ಷಣೆ ಇರುವಂತಹ ತೊಟ್ಟಿಲಿನಲ್ಲಿ ಕುಳಿತು ತೂಗಾಡುವುದು. (4 ತಿ) | ಶಿ ಫ 18 |
| 22 | ಕನ್ನಡಿಯಲ್ಲಿ ತನ್ನನ್ನು ನೋಡಿಕೊಂಡು ಆದಕ್ಕೆ ಪ್ರತಿಕ್ರಿಯಿಸುವುದು. (6 ತಿ) | ಶಿ ಫ 6 |
| 23 | ನೀರಿನ ಟಬ್ಬಿನಲ್ಲಿ ಕೂರಿಸಿದಾಗ ಕೈಯಿಂದ ನೀರನ್ನು ಬಡಿಯುವುದು. (6 ತಿ) | |
| 24 | ಕಚಗುಳಿಕೊಟ್ಟಾಗ ನಗುವುದು. (7 ತಿ) | |
| 25 | ದೃಷ್ಟಿ ತಡೆಯಾಗಿರುವ ಬಟ್ಟೆಯನ್ನು ಮುಖದಿಂದ ತೆರೆಯುವುದು. (8 ತಿ) | |
| 26 | ವಿವಿಧ ಬಗೆಯ ಸುವಾಸನೆ ಮತ್ತು ಕೆಟ್ಟವಾಸನೆಗೆ ಪ್ರತಿಕ್ರಿಯಿಸುವುದು. (8 ತಿ) | ಶಿ ಫ 11 |
| 27 | ನಾಲಗೆಯ ಮೇಲೆ ಇರಿಸಿದ ವಿವಿಧ ರುಚಿಗಳಿಗೆ ಪ್ರತಿಕ್ರಿಯಿಸುವುದು. (8 ತಿ) | |
| 28 | ತಾಳಗಳ ಜೊತೆಗೆ ತಲೆಯನ್ನು ತೂಗುವುದು. (8 ತಿ) | ಶಿ ಫ 14 |
| 29 | ಕಾಲನ್ನು ಬಾಯಿಗೆ ತರುವುದು. (8 ತಿ) | |
| 30 | ಮಗುಚಿ ಮಲುಗಿದಾಗ ಕಾಲುಗಳನ್ನು ಹಿಂದಕ್ಕೆ ಬಗ್ಗಿಸುವುದು ಆಥವಾ ತಾಗಿಸುವುದರ ಮೂಲಕ ಖುಷಿಪಡುವುದು. (8 ತಿ) | |
| 31 | ಕೈಯಿಂದ ಮುಖ ಮುಚ್ಚಿ, ತೆಗೆದು ಮಾಡುವ ಚಟುವಟಿಕೆಗಳಿಗೆ ಖುಷಿಪಡುವುದು. (9 ತಿ) | |

| | | |
|---|---|---|
| 32 | ಸೊಂಟ ಹಿಡಿದು ಬುಗುರಿ ಹಾಗೆ ತಿರುಗಿಸಿದಾಗ ಈ ಚಲನೆಯಿಂದ ಖುಷಿಪಡುವುದು (9 ತಿ) | |
| 33 | ಕೈಗಳ ಎಡ, ಬಲದ ಆಧ್ಯತೆಯ ಪ್ರಕಟ. (12 ತಿ) | |
| 34 | ಕಣ್ಣುಗಳಿಂದ ವೀಕ್ಷಿಸುವ ಉಪಕರಣಗಳನ್ನು ಬಳಸಿ ನೋಡುವುದು. (24 ತಿ) | ಬಾ ಫ 1-2 |
| 35 | ಶಬ್ದ ಮಾಡುವ ವಸ್ತುಗಳ ಕಡೆಗೆ ಗಮನಿಸುವುದು. (30 ತಿ) | ಬಾ ಫ 3 |
| 36 | ಆಟ ಆಡುವ ತೂಯುವ ಮರದ ಕುದುರೆಯ ಮೇಲೆ ಕೂರುವುದು. (30 ತಿ) | ಶಿ ಫ 19 |
| 37 | ತಣ್ಣನೆ ಮತ್ತು ಬಿಸಿಯ ನಡುವಿನ ವ್ಯತ್ಯಾಸವನ್ನು ಪ್ರತ್ಯೇಕಿಸುವುದು. (36 ತಿ) | |
| 38 | ಸರಳ ಆಕಾರಗಳನ್ನು (ವೃತ್ತ, ಚೌಕ, ತ್ರಿಭುಜ) ಬೇರ್ಪಡಿಸುವುದು. (36 ತಿ) | ಬಾ ಫ 29 |
| 39 | ವಿಭಿನ್ನವಾದ ರುಚಿಗಳನ್ನು ಪ್ರತ್ಯೇಕಿಸುವುದು. (36 ತಿ) | |
| 40 | ಆಳತೆಯಿಂದ ಬೇರ್ಪಡಿಸುವುದು. (36 ತಿ) | ಬಾ ಫ 29 |
| 41 | ಬಣ್ಣಗಳಿಂದ ಬೇರ್ಪಡಿಸುವುದು. (36 ತಿ) | ಬಾ ಫ 30 |
| 42 | ನುಣುಪು ಮತ್ತು ಒರಟು ಕಂಬಳಿಯ ವ್ಯತ್ಯಾಸವನ್ನು ಸ್ಪರ್ಶ ಜ್ಞಾನದಿಂದ ಪ್ರತ್ಯೇಕಿಸುವುದು. (42 ತಿ) | ಬಾ ಫ 31 |
| 43 | ವಸ್ತುಗಳನ್ನು ಸ್ಪರ್ಶದಿಂದ ಗುರುತಿಸುವುದು. (42 ತಿ) | ಬಾ ಫ 31 |
| 44 | ಚಲನೆಯಲ್ಲಿರುವಾಗ ಸಮತೋಲನದಿಂದ ನಿಂತುಕೊಳ್ಳುವುದು. (48 ತಿ) | |
| 45 | ಉಸಿರಾಟದ ವ್ಯಾಯಾಮವನ್ನು ಅನುಕರಿಸುವ ಸಾಮರ್ಥ್ಯ. (48 ತಿ) | ಬಾ ಫ 21 |
| 46 | ಕಣ್ಣು ಕಟ್ಟಿ ನಡೆಯುವಾಗ ಸಮತೋಲನವಾಗಿ ನಡೆಯುವುದು. (48 ತಿ) | ಪೂ ಫ 1 |
| 47 | ಸ್ಪರ್ಶದಿಂದ ಆಕಾರಗಳನ್ನು ಗುರುತಿಸುವುದು. (48 ತಿ) | ಬಾ ಫ 29 |
| 48 | ಒಂದರ ಮೇಲೊಂದಿರುವ ಚಿತ್ರಗಳನ್ನು ಒಂದೊಂದಾಗಿ ಗುರುತಿಸುವುದು. (60 ತಿ) | |
| 49 | ಆಹಾರದ ರುಚಿಯನ್ನು ಗುರುತಿಸಿ ಮತ್ತು ಅವುಗಳಲ್ಲಿರುವ ದೋಷವನ್ನು ಸರಿಪಡಿಸುವುದಕ್ಕೆ ಸೂಚಿಸುವುದು. (66 ತಿ) | |
| 50 | ಎಡ ಮತ್ತು ಬಲ ಭಾಗಗಳ ತಿಳುವಳಿಕೆ. (72 ತಿ) | |

| ಸಂಖ್ಯೆ | ಸಾಮಾನ್ಯ ಚಲನೆ (ಸಾ) | ಆಟಿಕೆಯ ಸೂಚ್ಯ |
|---|---|---|
| 1 | ನೆಲದಿಂದ ಮೂಗನ್ನು ಬೇರ್ಪಡಿಸುವುದಕ್ಕೆ ಹೊಟ್ಟೆಯ ಮೇಲೆ ಭಾರವಿಟ್ಟು ತಲೆ ಎತ್ತುವುದು. (3 ತಿ) | |
| 2 | ಮಗುಚಿ ಮಲಗಿದಾಗ ಮೊಣಕ್ಕೈ ಮೇಲೆ ಭಾರ ಬಿಡುವುದು. (6 ತಿ) | |
| 3 | ಹೊಟ್ಟೆಯ ಮೇಲೆ ಮಲಗಿರುವಾಗ ಮುಂದಕ್ಕೆ ತೆವಳುವುದು. (9 ತಿ) | |
| 4 | ಎರಡು ಮುಷ್ಟಿಗಳನ್ನು ಬಾಯಿಯ ಬಳಿ ತಂದು ಹೊಡೆದುಕೊಳ್ಳುವುದು. (9 ತಿ) | |
| 5 | ಹೊಟ್ಟೆಯಿಂದ ಬೆನ್ನಿಗೆ, ಬೆನ್ನಿನಿಂದ ಹೊಟ್ಟೆಗೆ ಮಗುಚುವುದು (ಹೊಟ್ಟೆಯಿಂದ ಹಿಂದಕ್ಕೆ ಮತ್ತು ಹಿಂದಿನಿಂದ ಹೊಟ್ಟೆಗೆ) (9 ತಿ) | |
| 6 | ಸ್ವಂತ ಕುಳಿತುಕೊಳ್ಳುವುದು. (9 ತಿ) | |
| 7 | ಕುಳಿತಿರುವುದರಿಂದ ನಿಲ್ಲುವ ಸ್ಥಿತಿಗೆ ಜಗಿಯುವುದು ಇಲ್ಲದಿದ್ದರೆ ನಿಂತಿರುವುದರಿಂದ ಕೂರುವುದು. (9 ತಿ) | |
| 8 | ಆಸರೆಯಿಲ್ಲದೆ ಕುಳಿತುಕೊಳ್ಳುವುದು. (9 ತಿ) | |
| 9 | ಕೈಯಿಂದ ಟಾಟ ಅಥವಾ ಬೈ ಬೈ ಬೀಸುವುದು. (9 ತಿ) | |
| 10 | ಮಗುವನ್ನು ಎದೆಯ ಮಟ್ಟಕ್ಕೆ ಎತ್ತಿದಾಗ ಮೇಲೆ ಕೆಳಗೆ ಚಿಮ್ಮುವುದು. (9 ತಿ) | |
| 11 | ತೆವಳುವುದು. (12 ತಿ) | |
| 12 | ಆಸರೆಯಿಲ್ಲದೆ ನಿಲ್ಲುವುದು. (12 ತಿ) | |
| 13 | ಎರಡು ಮೂರು ಹೆಜ್ಜೆ ಸ್ವತಂತ್ರವಾಗಿ ಹಾಕುವ ಸಾಮರ್ಥ್ಯ (12 ತಿ) | |
| 14 | ಹತ್ತು ಹೆಜ್ಜೆಗಳನ್ನಾದರೂ ಸ್ವತಂತ್ರವಾಗಿ ನಡೆಯುವುದು. (15 ತಿ) | |
| 15 | ಕುರ್ಚಿಯ ಮೇಲೆ ಕುಳ್ಳಿರಿಸಿದಾಗ ಬೀಳದ ರೀತಿಯಲ್ಲಿ ತಾನೇ ಕುಳಿತುಕೊಳ್ಳುವುದು. (15 ತಿ) | |
| 16 | ಪಲ್ಟಿ ಹೊಡೆಯುವ ರೀತಿಯಲ್ಲಿ ತಲೆಯನ್ನು ಬಗ್ಗಿಸುವುದು. (18 ತಿ) | |
| 17 | ಎತ್ತರ ಕಡಿಮೆ ಇರುವಂತಹ ಕುರ್ಚಿಯ ಮೇಲೆ ಹತ್ತುವುದು. (೧೮ ತಿ) | |
| 18 | ಚೆಂಡನ್ನು ನಿರ್ದಿಷ್ಟವಾದ ಜಾಗದೆಡೆಗೆ ತಳ್ಳುವುದು. (18 ತಿ) | ಬಾ ಫ 27 |
| 19 | ನೆಲದಿಂದ ಮೇಲಕ್ಕೆ ಎರಡು ಕಾಲಿನಿಂದ ಜಿಗಿಯುವುದು. (24 ತಿ) | |
| 20 | ನಿರ್ದಿಷ್ಟವಾದ ಜಾಗದೆಡೆಗೆ ಚೆಂಡನ್ನು ಒದೆಯುವುದು. (24 ತಿ) | ಬಾ ಫ 27 |
| 21 | ಎರಡು ಮಂಡಿಗಳ ಮೇಲೆ ಕೂರುವುದು. (24 ತಿ) | |
| 22 | ಓಡುವುದು. (24 ತಿ) | |
| 23 | ಬಸಿಕೆ ಹೊಡೆಯುವುದು. (24 ತಿ) | |
| 24 | ಒಂದು ಅಡಿ ಎತ್ತರ ನೆಗೆಯುವುದು. (24 ತಿ) | |
| 25 | ನೆಟ್ಟಗಿರುವ ಲೈನಿನ ಮೇಲೆ ಸಮತೋಲನವಾಗಿ ನಡೆಯುವುದು. (24 ತಿ) | |
| 26 | ಚಕ್ಕಲ ಬಕ್ಕಲ ಹಾಕಿ ಕೂರುವುದು. (24 ತಿ) | |
| 27 | ಒಂಟಿ ಕಾಲಿನಲ್ಲಿ ಸಮತೋಲನವಾಗಿ ನಿಲ್ಲುವುದು. (30 ತಿ) | |

| | | |
|---|---|---|
| 28 | ತಲೆಯ ಮೇಲೆ ಪುಸ್ತಕವನ್ನು ಇಟ್ಟುಕೊಂಡು ಸಮತೋಲನ ಸ್ಥಿತಿಯಲ್ಲಿ ನಿಲ್ಲುವುದು. (30 ತಿ) | ಶಿ ಘ 3 |
| 29 | ತಾಳ ಬದ್ಧವಾಗಿ ನಡೆಯುವುದು (ಸೂಚನೆ ಅಥವಾ ತಾಳಕ್ಕನುಗುಣವಾಗಿ) (30 ತಿ) | |
| 30 | ತನ್ನ ಕಾಲುಗಳ ಮೂಲಕ ಮೆಟ್ಟಿಲುಗಳನ್ನು ಹತ್ತಿ ಇಳಿಯುವುದು. (36 ತಿ) | |
| 31 | ಹತ್ತು ಅಡಿ ದೂರಕ್ಕೆ ದೊಡ್ಡ ಪೆಟ್ಟಿಗೆಗಳನ್ನು ತಳ್ಳುವುದು. (36 ತಿ) | |
| 32 | ದೂರದಿಂದ ಪೆಟ್ಟಿಗೆಗೆ ಚೆಂಡನ್ನು ಎಸೆಯುವುದು. (42 ತಿ) | ಬಾ ಘ 27 |
| 33 | ದೂರದಿಂದ ಎಸೆದ ಚೆಂಡನ್ನು ಕೈಯಿಂದ ಹಿಡಿಯುವುದು. (42 ತಿ) | ಬಾ ಘ 27 |
| 34 | ಏಣಿಯ ನಾಲ್ಕು ಐದು ಹಂತಗಳನ್ನು ಹತ್ತುವುದು. (42 ತಿ) | |
| 35 | ಹೇಳಿದ್ದಲ್ಲಿ ಕುರ್ಚಿ–ಬೆಂಚುಗಳ ಧೂಳನ್ನು ಒರೆಸುವುದು. (42 ತಿ) | |
| 36 | ಪಲ್ಟಿ ಹೊಡೆಯುವುದು. (48 ತಿ) | |
| 37 | ಸಮತೋಲನವನ್ನು ಕಾಯ್ದುಕೊಂಡು ನಾಲ್ಕರಿಂದ ಐದು ಹಂತಗಳಲ್ಲಿ ಹಿಮ್ಮುಖವಾಗಿ ನಡೆಯುವುದು (48 ತಿ) | |
| 38 | ಆಟದ ದಾಂಡಿನಿಂದ ಚೆಂಡನ್ನು ಸರಿಯಾಗಿ ಹೊಡೆಯಲು ಪ್ರಯತ್ನಿಸುವುದು. (48 ತಿ) | ಬಾಘ 27 |
| 39 | ಪೊರಕೆಯಿಂದ ಗುಡಿಸುವುದು. (60 ತಿ) | |
| 40 | ಕಪ್ಪೆಯ ಜಿಗಿತವನ್ನು ಜಿಗಿಯುವುದು. (60 ತಿ) | |
| 41 | ಐದು ಹೆಜ್ಜೆಗಳನ್ನಾದರೂ ಕುಂಟುವುದು. (66 ತಿ) | |
| 42 | ಎರಡು ಕಾಲುಗಳನ್ನು ಒಂದರ ನಂತರ ಒಂದರಂತೆ ಬಳಸಿ ಜಿಗಿಯುವುದು. (66 ತಿ) | |
| 43 | ಹತ್ತು ಸೆಕೆಂಡುಗಳ ಸಮಯವಾದರೂ ಸಮವಾದ ಕಂಬಗಳನ್ನು ಹಿಡಿದು ಜೋತು ಬೀಳುವುದು. (66 ತಿ) | |
| 44 | ಈಜುವುದು. (72 ತಿ) | |
| 45 | ಪಾದರಕ್ಷೆಗಳಿಗೆ ಅಥವಾ ಬೂಟುಗಳುಗೆ ಪಾಲಿಶ್ ಹಚ್ಚುವುದು. (72 ತಿ) | |
| 46 | ಸ್ಕೇಟಿಂಗ್ ಆಡುವುದು. (72 ತಿ) | |
| 47 | ಚೆಂಡನ್ನು ಹತ್ತು ಭಾರಿಯಾದರೂ ಪುಟಿಸುವುದು. (72 ತಿ) | |
| 48 | ಗೋಣಿ ಚೀಲದಲ್ಲಿ ನಿಂತು ನಡೆಯುವುದು. (72 ತಿ) | |
| 49 | ಆಕೃತಿಗೆ ಚಂಡಿನಿಂದ 5 ಅಡಿ ದೂರದಿಂದ ಹೊಡೆಯುವುದು. (72 ತಿ) | |
| 50 | ಉಗುರು ಕತ್ತರಿಸುವುದು. (72 ತಿ) | ಶಾ ಪೂ ಘ 33 |

ಶಿ. ಘ. : ಶಿಶು ಘಟಕ : ಬಾ. ಘಟಕ. ಬಾಲ್ಯ ಘಟಕ : ಶಾ. ಪೂ. ಘಟಕ : ಶಾಲಾಪೂರ್ವ ಘಟಕ

| ಸಂಖ್ಯೆ | ಸೂಕ್ಷ್ಮಚಲನೆ (ಸೂ) | ಆಟಿಕೆಯ ಸೂಚ್ಯ |
|---|---|---|
| 1 | ಘನಾಕೃತಿಯ ವಸ್ತುವನ್ನು ಒಂದು ಕೈಯಲ್ಲಿ ಸ್ವಲ್ಪ ಸಮಯ ಹಿಡಿದಿರುವುದು. (6 ತಿ) | |
| 2 | ಗೋಳಾಕಾರದ ವಸ್ತುಗಳನ್ನು ಮುಷ್ಟಿಯಿಂದ ಹಿಡಿಯುವುದು. (6 ತಿ) | ಬಾ ಘ 27 |
| 3 | ಕೊಂಡಿಯನ್ನು ಹಿಡಿಯುವುದು. (6 ತಿ) | |
| 4 | ಲೋಟವನ್ನು ಹಿಡಿಯುವ ಸಾಮರ್ಥ್ಯ. | ಬಾ ಘ 10 |
| 5 | ಮುಂದೆ ತೂಗು ಹಾಕಿರುವ ಸಣ್ಣ ವಸ್ತುಗಳನ್ನು ಹಿಡಿಯಲು ಪ್ರಯತ್ನಿಸುವುದು. (6ತಿ) | ಬಾ ಘ 17 |
| 6 | ಮುಷ್ಟಿ ಹಿಡಿತ (6 ತಿ) | |
| 7 | ಅಂಗೈಯಿಂದ ವಸ್ತುಗಳನ್ನು ಹಿಡಿಯಲು ಪ್ರಯತ್ನಿಸುವುದು. (6 ತಿ) | ಶಾ ಪೂ ಘ 16 |
| 8 | ಅಂಗಾತ ಮಲಗಿರುವ ಸಮಯದಲ್ಲಿ ಕೈಗಳನ್ನು ದೂರ ಚಾಚಿ ಎತ್ತಿಕೊಳ್ಳುವಂತೆ ಸೂಚಿಸುವುದು. (9 ತಿ) | |
| 9 | ಗಿಲಕಿ ಅಥವಾ ಗೊಂಬೆಯನ್ನು ಅಂಗೈಯಲ್ಲಿ ಹಿಡಿಯುವುದು. (9 ತಿ) | ಶಿ ಘ 10 |
| 10 | ಕನ್ನಡಿಯಲ್ಲಿನ ಪ್ರತಿಬಿಂಬವನ್ನು ತಟ್ಟುವುದು. (9 ತಿ) | ಶಿ ಘ 6 |
| 11 | ತೋರ್ಬೆರಳು ಮತ್ತು ಹೆಬ್ಬೆರಳಿನಿಂದ  ಸಣ್ಣ ವಸ್ತುವನ್ನು ಎತ್ತಿಕೊಳ್ಳುವುದು. | ಶಿ ಘ 7 |
| 12 | ಮುಖದ ಮೇಲಿರುವ ಸಣ್ಣ ದಾರ ಅಥವಾ ಎಳೆಗಳನ್ನು ಕೈಯಿಂದ ಸರಿಸುವುದು. (12 ತಿ) | |
| 13 | ಪುಸ್ತಕದಿಂದ ಒಂದೊಂದೇ ಹಾಳೆಗಳನ್ನು ಮುಗುಚಿ ಹಾಕುವ ಸಾಮರ್ಥ್ಯ (12 ತಿ) | ಶಿ ಘ 3 |
| 14 | ಆಟದ ಸಾಮಾನನ್ನು ಎತ್ತಿಕೊಳ್ಳಲು ಬಗ್ಗುವುದು. (15 ತಿ) | ಶಿ ಘ 15 |
| 15 | ಸಣ್ಣ ವಸ್ತುಗಳನ್ನು ಒಂದು ಡಬ್ಬಿಗೆ ಹಾಕುವುದು. (18 ತಿ) | ಶಿ ಘ 7 |
| 16 | ಒಂದು ಸಣ್ಣ ಬಾಟಲಿಯನ್ನು ತಿರುವು ಮುರುವು ಮಾಡಿ ಒಳಗಿರುವ ಬಟಾಣಿ/ಒಣ ದ್ರಾಕ್ಷಿಯನ್ನು ಪಡೆಯುವುದು. (18 ತಿ) | |
| 17 | ಬಾಗಿಲ ಚಿಲಕಗಳನ್ನು ಹಾಕುವುದು ಅಥವಾ ಮುಚ್ಚುವುದು. (24 ತಿ) | |
| 18 | ಬಾಟಲಿನ ಮುಚ್ಚಳವನ್ನು ತಿರುಗಿಸಿ ಹಾಕುವುದು ಅಥವಾ ಮುಚ್ಚುವುದು. (30 ತಿ) | ಬಾ ಘ 10 |
| 19 | ಸಣ್ಣ ಬಾಯಿಯಿರುವ ಡಬ್ಬಿಗೆ ಬಟಾಣಿ/ಪಿನ್‌ಗಳನ್ನು ಹಾಕುವುದು. (30 ತಿ) | |
| 20 | ಬರೆಯುವ ವಸ್ತುಗಳನ್ನು ಮೂರು ಬೆರಳುಗಳಲ್ಲಿ ಸರಿಯಾಗಿ ಹಿಡಿಯುವುದು. (30 ತಿ) | ಶಾ ಪೂ ಘ 8,<br>ಶಾ ಪೂ ಘ21,<br>ಶಾ ಪೂ ಘ37, |
| 21 | ವೈಯರಿಗೆ/ಸ್ವೆಟರ್ ಸೂಜಿಗೆ ಮಣಿಗಳನ್ನು ಪೋಣಿಸುವುದು. (30 ತಿ) | ಬಾ ಘ 11 |
| 22 | ಹುಂಡಿಯೊಳಗೆ ನಾಣ್ಯಗಳನ್ನು ಹಾಕುವುದು. (36 ತಿ) | ಬಾ ಘ 13 |
| 23 | ಬೀಗದ ಕೈಯನ್ನು ಬೀಗದ ಕಂಡಿಗೆ ಹಾಕುವುದು. (36 ತಿ) | ಬಾ ಘ 8<br>ಶಾ ಪೂ ಘ12, |
| 24 | ಬಟ್ಟೆಯ ಅಥವಾ ಚರ್ಮದ ವಸ್ತುಗಳ ಜಿಪ್ಪನ್ನು ಹಾಕುವುದು/ತೆಗೆಯುವುದು. (36 ತಿ) | ಬಾ ಘ 5 |
| 25 | ಕೈಚೌಕವನ್ನು ನಾಲ್ಕು ಮಡಿಕೆ ಮಡಿಸುವುದು. (36 ತಿ) | ಬಾ ಘ 10 |

| | | |
|---|---|---|
| 26 | ಬಾಟಲಿಯ ಮುಚ್ಚಳವನ್ನು ತಿರುಗಿಸಿ ಹಾಕುವುದು. (42 ತಿ) | |
| 27 | ಮುಂಗಾಲಿನಿಂದ ನಡೆಯುವುದು. (42 ತಿ) | |
| 28 | ಸಣ್ಣ ಸಣ್ಣ ವಸ್ತುಗಳನ್ನು ಒಂದು ಗೂಡಿಸುವುದಕ್ಕೆ ರಬ್ಬರ್ ಬ್ಯಾಂಡ್ ಹಾಕುವುದು. (42 ತಿ) | ಬಾ ಘ 14 |
| 29 | ಬಟ್ಟೆ ಪಿನ್ನುಗಳನ್ನು ತೆಗೆಯುವುದು/ಹಾಕುವುದು. (42 ತಿ) | ಶಾ ಪೂ ಘ 6 |
| 30 | ಘನಾಕೃತಿಗಳ ವಸ್ತುಗಳನ್ನು ಸಾಲಾಗಿ ರೈಲು ಬೋಗಿಗಳಂತೆ ಜೋಡಿಸುವುದು (ಒಂದನೇ ಹಂತ) (42 ತಿ) | |
| 31 | ಅಳಿಸುವ ರಬ್ಬರ್‌ಗಳನ್ನು ಉಪಯೋಗಿಸುವುದು (42 ತಿ) | ಶಾ ಪೂ ಘ 8 |
| 32 | ಅಂಟು ಉಪಯೋಗಿಸಿ ಕಾಗದವನ್ನು ಅಂಟಿಸುವುದು. (42 ತಿ) | ಶಾ ಪೂ ಘ 42 |
| 33 | ಬೋಗಿಗಿಟ್ಟ ಎಂಜಿನಿನ ಹಾಗೆ ಪರಿವರ್ತಿಸುವುದು. (ಎರಡನೇ ಹಂತ) (48 ತಿ) | |
| 34 | ಅಂಟು ಪಟ್ಟಿಯನ್ನು ಬಳಸುವುದು. (48 ತಿ) | ಶಾ ಪೂ ಘ 42 |
| 35 | ಪೇಪರನ್ನು ಮಡಿಚಿ ಕವರಿನ ಒಳಗೆ ಹಾಕುವುದು. (48 ತಿ) | ಶಾ ಪೂ ಘ 9 |
| 36 | ಪೆನ್ಸಿಲ್ ಮತ್ತು ಮೆಂಡರನ್ನು ಬಳಸುವುದು. (54 ತಿ) | ಶಾ ಪೂ ಘ 10 |
| 37 | ನಾಲ್ಕು ಘನಾಕೃತಿಗಳನ್ನು ಒಂದರ ಮೇಲೊಂದನ್ನಿಟ್ಟು ಗೋಪುರದ ಆಕೃತಿಯಲ್ಲಿ ಜೋಡಿಸುವುದು (ಮೂರನೇ ಹಂತ) (60 ತಿ) | |
| 38 | ದಾರವನ್ನು ಕಟ್ಟುವುದು, ದಾರದ ಗಂಟುಗಳನ್ನು ಎಳೆಯುವುದು ಅಥವಾ ಬೂಟುಗಳ ಲೇಸುಗಳನ್ನು ಕಟ್ಟುವುದು. (60 ತಿ) | ಶಾ ಪೂ ಘ 11 |
| 39 | ಕೀಲಿಯನ್ನು ಉಪಯೋಗಿಸಿ ಬಾಗಿಲ ಬೀಗವನ್ನು ಹಾಕುವುದು. (66 ತಿ) | |
| 40 | ನಾಲ್ಕು ಮಡಿಕೆ ಇರುವ ಕಾಗದವನ್ನು ಮಡಿಕೆಯ ನೇರಕ್ಕೆ ನಾಲ್ಕು ತುಂಡಾಗಿ ಹರಿಯುವುದು. (66 ತಿ) | |
| 41 | ಆಲಿಕೆಯ ಮೂಲಕ ನೀರನ್ನು ಬಾಟಲಿಗೆ ತುಂಬುವುದು. (66 ತಿ) | |
| 42 | ಬೆಂಕಿ ಕಡ್ಡಿಯನ್ನು ಹಚ್ಚುವುದು. (66 ತಿ) | ಶಾ ಪೂ ಘ 4 |
| 43 | ಆಫೀಸಿನಲ್ಲಿ ಉಪಯೋಗಿಸುವ ವಸ್ತುಗಳು ಅಂದರೆ ಸ್ಟೇಪ್ಲರ್, ಪಂಚಿಂಗ್ ಮೆಷಿನ್, ಮತ್ತು ಪಿನ್ನುಗಳನ್ನು ಬಳಸಲು ತಿಳಿದಿರುವುದು. (66 ತಿ) | ಶಾ ಪೂ ಘ 13-14 |
| 44 | ಅಣ್ಣೆ ಕಲ್ಲಿನಾಟ ಆಡುವುದು. (66 ತಿ) | ಶಾ ಪೂ ಘ 31 |
| 45 | ಘನಾಕೃತಿಗಳನ್ನು ಉಪಯೋಗಿಸಿ ಎರಡು ಗೋಪುರಗಳನ್ನು ನಿರ್ಮಿಸಿ ಅವುಗಳ ನಡುವೆ ಸೇತುವೆಯನ್ನು ಜೋಡಿಸುವುದು. (ನಾಲ್ಕನೆಯ ಹಂತ). (72 ತಿ) | |
| 46 | ಮಧ್ಯಮ ಸಮದ ಸೂಜಿಗೆ ದಾರವನ್ನು ಪೋಣಿಸುವುದು. (72 ತಿ) | ಶಾ ಪೂ ಘ 5 |
| 47 | ಕತ್ತರಿಯನ್ನು ಉಪಯೋಗಿಸಿಕೊಂಡು ಆಕೃತಿಗಳನ್ನು ಕತ್ತರಿಸುವುದು. (72 ತಿ) | ಶಾ ಪೂ ಘ 17 |
| 48 | ಒದ್ದೆ ಬಟ್ಟೆಯನ್ನು ಹಿಂಡುವುದು. (72 ತಿ) | ಬಾ ಘ 16 |
| 49 | ಇಸ್ಪೀಟ್ ಎಲೆಗಳನ್ನು ಕ್ರಮಬದ್ಧವಾಗಿ ಜೋಡಿಸಿ ಕೈಯಲ್ಲಿ ಹಿಡಿಯುವ ಸಾಮರ್ಥ್ಯ. (72 ತಿ) | ಶಾ ಪೂ ಘ 19 |
| 50 | ನೆಲದ ಮೇಲೆ ಸಾಮಾನ್ಯ ರೀತಿಯ ರಂಗೋಲಿಯನ್ನು ಬಿಡಿಸುವುದು. (72 ತಿ) | |

ಶಿ. ಘ. : ಶಿಶು ಘಟಕ : ಬಾ. ಘ : ಬಾಲ್ಯ ಘಟಕ : ಶಾ. ಪೂ. ಘ : ಶಾಲಾಪೂರ್ವ ಘಟಕ



ಸೂಕ್ಷ್ಮ ಚಲನೆ ೪ : ಲೋಟವನ್ನು ಹಿಡಿಯುವ ಸಾಮರ್ಥ್ಯ



ಸೂಕ್ಷ್ಮ ಚಲನೆ ೭ : ಅಂಗೈಯಿಂದ ವಸ್ತುಗಳನ್ನು
ಹಿಡಿಯಲು ಪ್ರಯತ್ನಿಸುವುದು



ಸೂಕ್ಷ್ಮ ಚಲನೆ ೧೧ : ತೋರ್ಬೆರಳು ಮತ್ತು ಹೆಬ್ಬೆರಳಿನಿಂದ
ಸಣ್ಣವಸ್ತುಗಳನ್ನು ಎತ್ತಿಕೊಳ್ಳುವುದು



ಸೂಕ್ಷ್ಮ ಚಲನೆ ೧೩ : ಪುಸ್ತಕದಿಂದ ಒಂದೊಂದೇ ಹಾಳೆಗಳನ್ನು
ಮಗುಚಿ ಹಾಕುವ ಸಾಮರ್ಥ್ಯ



ಸೂಕ್ಷ್ಮ ಚಲನೆ ೧೮ : ಸಣ್ಣ ವಸ್ತುಗಳನ್ನು ಒಂದು ಡಬ್ಬಿಗೆ ಹಾಕುವುದು



ಸೂಕ್ಷ್ಮ ಚಲನೆ ೧೯ : ಸಣ್ಣ ಬಾಯಿಯಿರುವ ಡಬ್ಬಿಗೆ
ಸಣ್ಣಗೋಲಿಗಳನ್ನು ಹಾಕುವುದು



ಸೂಕ್ಷ್ಮ ಚಲನೆ ೨೦ : ಬರೆಯುವ ವಸ್ತುಗಳನ್ನು
ಮೂರು ಬೆರಳುಗಳಲ್ಲಿ ಸರಿಯಾಗಿ ಹಿಡಿಯುವುದು



ಸೂಕ್ಷ್ಮ ಚಲನೆ ೨೧ : ಹುಂಡಿಯೊಳಗೆ ನಾಣ್ಯಗಳನ್ನು ಹಾಕುವುದು

| ಸಂಖ್ಯೆ | ಸಂವಹನ* ಅನುಬಂಧದಲ್ಲಿ ನೋಡತಕ್ಕದ್ದು (ಸಂ) | ಆಟಿಕೆಯ ಸೂಚ್ಯ |
|---|---|---|
| 1 | ಪರಿಚಯದ ಧ್ವನಿಗೆ ಸುಮ್ಮನಾಗುವುದು. (3 ತಿ) | |
| 2 | ಶಬ್ದದ ದಿಕ್ಕಿನ ಮೂಲವನ್ನು ಗುರುತಿಸುವುದು. (3 ತಿ) | ಶಿ ಫ 2,<br>ಶಿ ಫ 10,<br>ಶಿ ಫ 14 |
| 3 | ಸ್ವಂತ ಹೆಸರಿಗೆ ಪ್ರತಿಕ್ರಿಯಿಸುವುದು. (6 ತಿ) | |
| 4 | ಬೇರೆಯವರು ಮಾಡಿದ ಅಸ್ಪಷ್ಟ ಶಬ್ದಗಳನ್ನು ಪ್ರತಿ ಉಚ್ಛರಿಸುವುದು. (6 ತಿ) | |
| 5 | ಮಗು ತನ್ನ ಕೈಯಲ್ಲಿಟ್ಟುಕೊಂಡಿರುವ ವಸ್ತುವನ್ನು ಕೇಳಿದಾಗ ಕೊಡುವುದು. (9 ತಿ) | |
| 6 | ಮಗುವಿನ ಹೆಸರನ್ನು ಕೇಳಿ ಅದು ಯಾರು ಎಂದು ಪ್ರಶ್ನಿಸಿದಾಗ ತನ್ನನ್ನು ಮುಟ್ಟಿ ತೋರಿಸುವ ಸಾಮರ್ಥ್ಯ. (9 ತಿ) | |
| 7 | ಸರಳವಾದ ಸೂಚನೆ ಆದೇಶಗಳನ್ನು ಅರ್ಥ ಮಾಡಿಕೊಳ್ಳುವುದು. (12 ತಿ) | |
| 8 | ಕನಿಷ್ಟ ಪಕ್ಷ ಮೂರು ಪದಗಳ ಅರ್ಥವನ್ನು ತಿಳಿದು ಬಳಸುವುದು (12 ತಿ) | |
| 9 | ಕೈ ಸನ್ನೆಯ ಮೂಲಕ ಅಥವಾ ಮಾತಿನಿಂದ ವಸ್ತುಗಳನ್ನು ತೋರಿಸುವುದು/ ಕೇಳುವುದು. (15 ತಿ) | |
| 10 | ಪ್ರಾಣಿಗಳ ಮತ್ತು ಯಂತ್ರಗಳ ಶಬ್ದವನ್ನು ಕೇಳಿದಾಗ ಅನುಕರಿಸುವುದು. (18 ತಿ) | |
| 11 | ವಸ್ತುವನ್ನು ಕಣ್ಮರೆಸಿದಾಗ ಇದೆ ಎಂದು ಅರ್ಥ ಮಾಡಿಕೊಳ್ಳುವುದು. (24 ತಿ) | |
| 12 | ಐದು ಕ್ರಿಯಾ ಸೂಚಕ ಆದೇಶಗಳನ್ನು ಗ್ರಹಿಸುವುದು (ಬನ್ನಿ, ಹೋಗು, ಕೂರು, ನಿಲ್ಲು, ಕಡಿ, ತಗೋ, ಹೌದು, ಇಲ್ಲ, ಇತರ.,) (24 ತಿ) | |
| 13 | ನನ್ನದು ಎಂಬ ಪದವನ್ನು ಹೆಚ್ಚಾಗಿ ಬಳಸುವುದು. (24 ತಿ) | |
| 14 | ಹೌದು, ಇಲ್ಲ ಎಂಬುದನ್ನು ಅರ್ಥ ಮಾಡಿಕೊಳ್ಳುವುದು. (24 ತಿ) | |
| 15 | ಐದು ದೇಹದ ಭಾಗಗಳನ್ನು ತೋರಿಸುವುದು. (30 ತಿ) | ಶಿ ಫ 12,<br>ಶಾ ಪೂ ಫ 32,<br>ಬಾ ಫ 32 |
| 16 | ಮೇಲೆ ಕೆಳಗೆ ಎಂಬ ಪದಗಳನ್ನು ಬಳಸುವುದು/ಅರ್ಥಮಾಡಿಕೊಳ್ಳುವುದು. (30 ತಿ) | |
| 17 | ಇಲ್ಲಿ ಮತ್ತು ಅಲ್ಲಿ ಇವುಗಳನ್ನು ಬಳಸುವುದು/ಅರ್ಥ ಮಾಡಿಕೊಳ್ಳುವುದು. (30 ತಿ) | |
| 18 | ಇದೇನು ಎಂದು ಪ್ರಶ್ನೆ ಮಾಡಿದಲ್ಲಿ ವಸ್ತುವನ್ನು ಹೆಸರಿನೊಡನೆ ಉತ್ತರಿಸುವುದು. (30 ತಿ) | ಬಾ ಫ 17 |
| 19 | ಮನೆಯಲ್ಲಿ ಬಳಸುವ ಸಾಮಗ್ರಿಗಳ ಹೆಸರುಗಳನ್ನು ಹೇಳುವುದು. (30 ತಿ) | ಬಾ ಫ 17 |
| 20 | ಕುಟುಂಬದವರ ಹೆಸರುಗಳನ್ನು ಹೇಳುವುದು. (36 ತಿ) | |
| 21 | ಹಾಡುಗಳನ್ನು ಮತ್ತು ಅಂತ್ಯ ಪ್ರಾಸಗಳನ್ನು ಹೇಳಿದ ಹಾಗೆ ಹೇಳುವುದು. (36 ತಿ) | |
| 22 | ವಿವಿಧ ವಸ್ತುಗಳ ಹೆಸರುಗಳನ್ನು ಹೇಳಿದಾಗ ಅವುಗಳನ್ನು ತೋರಿಸುವುದು. (36 ತಿ) | ಬಾ ಫ 17 |
| 23 | ಹಿಂದೆ ಮುಂದೆಯನ್ನು ಬೇರ್ಪಡಿಸುವ ಜ್ಞಾನ. (36 ತಿ) | |
| 24 | ಒಳಗೆ ಮತ್ತು ಹೊರಗೆ ಇವುಗಳನ್ನು ಬೇರ್ಪಡಿಸುವ ಜ್ಞಾನ (36 ತಿ) | |

| | | |
|---|---|---|
| 25 | ವೇಗ ಮತ್ತು ನಿಧಾನವನ್ನು ಬೇರ್ಪಡಿಸುವ ಜ್ಞಾನ (36 ತಿ) | |
| 26 | ಕಿರಿಯರು ಮತ್ತು ಹಿರಿಯರನ್ನು ಬೇರ್ಪಡಿಸುವ ಜ್ಞಾನ (42 ತಿ) | |
| 27 | ಆನ್ ಮತ್ತು ಆಫ್ ಪದಗಳನ್ನು ಬೇರ್ಪಡಿಸುವ ಜ್ಞಾನ (42 ತಿ) | |
| 28 | ಒಳ್ಳೆಯದು ಮತ್ತು ಕೆಟ್ಟದ್ದನ್ನು ಬೇರ್ಪಡಿಸುವ ಜ್ಞಾನ (42 ತಿ) | |
| 29 | ಹತ್ತಿರ ಮತ್ತು ದೂರವನ್ನು ಬೇರ್ಪಡಿಸುವ ಜ್ಞಾನ. (42 ತಿ) | |
| 30 | ಐದು ಜನ ಸ್ನೇಹಿತರ ಹೆಸರುಗಳನ್ನು ಹೇಳುವುದು. (42 ತಿ) | |
| 31 | ಸಂಭಾಷಣೆ ಮಾಡುವಾಗ ಅನುಕರಿಸುವುದರ ಮೂಲಕ ಸನ್ನೆಗಳನ್ನು ಉಪಯೋಗಿಸುವುದು. (42 ತಿ) | |
| 32 | ಒಂದಾದ ಮೇಲೆ ಒಂದರಂತೆ ಬರುವ ಎರಡು ಸಂಬಂಧಿತ ಆದೇಶಗಳನ್ನು ಅನುಕ್ರಮವಾಗಿ ಕಾರ್ಯಗತಗೊಳಿಸುವ ಸಾಮರ್ಥ್ಯ. (42 ತಿ) | |
| 33 | ಈಗ, ಬೇಗ, ಆಮೇಲೆ – ಇವುಗಳನ್ನು ಅರ್ಥ ಮಾಡಿಕೊಳ್ಳುವುದು. (48 ತಿ) | |
| 34 | ತನ್ನ ವಯಸ್ಸನ್ನು ಹೇಳುವುದು. (48 ತಿ) | |
| 35 | ವಾಣಿಜ್ಯ ಜಾಹೀರಾತುಗಳನ್ನು ನೆನಪಿನಿಂದ ಹೇಳುವುದು. (48 ತಿ) | |
| 36 | ಚಿಕ್ಕದಾದ ವಿಧೇಯತೆಯ ಸೂಚಕ ಪದಗಳನ್ನು ಉಪಯೋಗಿಸುವುದು. (ಧನ್ಯವಾದ ಮತ್ತು ದಯವಿಟ್ಟು) (48 ತಿ) | |
| 37 | ಪರಿಚಿತ ವಸ್ತುಗಳ ಬಳಕೆಯನ್ನು ಹೇಳುವುದು. (48 ತಿ) | |
| 38 | ದಂತ ಕಥೆಗಳನ್ನು ಹೇಳುವ ಸಾಮರ್ಥ್ಯ (54 ತಿ) | |
| 39 | ದೂರವಾಣಿಯಲ್ಲಿ ಸಂಭಾಷಿಸುವುದು. (60 ತಿ) | ಬಾ ಘ 20 |
| 40 | ತನ್ನ ಸ್ವಂತ ಸ್ಥಳದ ಹೆಸರನ್ನು ಹೇಳುವುದು. (60 ತಿ) | |
| 41 | ಕಥೆಗಳನ್ನು ಕೇಳುವುದು. (60 ತಿ) | |
| 42 | ಚಿತ್ರಗಳಲ್ಲಿರುವಂತಹ ಕ್ರಿಯೆಗಳನ್ನು ವಿವರಿಸುವುದು. (60 ತಿ) | ಬಾ ಘ 18 |
| 43 | ಮೂರು ಹಂತಗಳ ಸಲಹೆ ಸೂಚನೆಗಳನ್ನು ಅನುಕ್ರಮವಾಗಿ ಪಾಲಿಸುವುದು. (60 ತಿ) | |
| 44 | ಬಳಕೆಯಲ್ಲಿರುವ ಪದಗಳಿಗೆ ವಾಕ್ಯಗಳನ್ನು ನೀಡುವುದು. (60 ತಿ) | |
| 45 | ದೇಶದ ಮತ್ತು ರಾಜ್ಯದ ಹೆಸರುಗಳನ್ನು ಹೇಳುವುದು. (66 ತಿ) | |
| 46 | ಟಿ.ವಿ ಧಾರಾವಾಹಿಗಳು ಮತ್ತು ಸಣ್ಣ ಚಲನಚಿತ್ರಗಳನ್ನು ಗಮನದಲ್ಲಿಟ್ಟು ಅವುಗಳ ಬಗ್ಗೆ ಸಂಕ್ಷಿಪ್ತ ವಿವರಣೆ ನೀಡುವುದು. (66 ತಿ) | |
| 47 | ತಂದೆ ತಾಯಿಗಳ ಉದ್ಯೋಗಗಳನ್ನು ಹೆಸರಿಸುವುದು. (66 ತಿ) | |
| 48 | ಸ್ವತಂತ್ರವಾಗಿ ಹೊರಗಿನ ವ್ಯಕ್ತಿಗಳನ್ನು ವಿಚಾರಿಸುವುದು. (66 ತಿ) | |
| 49 | ಐದು ಬೆರಳುಗಳನ್ನು ಹೆಸರಿಸಿ ತೋರಿಸುವುದು/ಗುರುತಿಸುವುದು. (66 ತಿ) | |
| 50 | ಸಂಪೂರ್ಣ ಮನೆಯ ವಿಳಾಸವನ್ನು ನೀಡುವುದು. (72 ತಿ) | |

ಶಿ. ಘ. : ಶಿಶು ಘಟಕ : ಬಾ. ಘ : ಬಾಲ್ಯ ಘಟಕ : ಶಾ. ಪೂ. ಘ : ಶಾಲಾಪೂರ್ವ ಘಟಕ

| ಸಂಖ್ಯೆ | ಆಟದ ಚಟುವಟಿಕೆಗಳು (ಆ) | ಆಟಿಕೆಯ ಸೂಚ್ಯ |
|---|---|---|
| 1 | ವಸ್ತುಗಳನ್ನು ಕುಕ್ಕುವುದು. (9 ತಿ) | |
| 2 | ಚಪ್ಪಾಳೆ ತಟ್ಟಿ ಆಡುವುದು. (9 ತಿ) | |
| 3 | ಕುಳಿತಿರುವಾಗ ಚೆಂಡನ್ನು ನಿರ್ದಿಷ್ಟ ಜಾಗದೆಡೆಗೆ ಉರುಳಿಸುವುದು. (9 ತಿ) | ಬಾಫ 27 ಶಿಫ 8 |
| 4 | ನೆರಳನ್ನು ನೋಡಿ ಆಡುವುದು. (12 ತಿ) | |
| 5 | ಕಾಲುಗಳನ್ನು ಒಂದಾದ ಮೇಲೆ ಒಂದರಂತೆ ಬಳಸಿ ಕುಪ್ಪುವುದು. (24 ತಿ) | ಶಾ ಪೂ ಫ 2 |
| 6 | ಒಬ್ಬನೇ/ಒಬ್ಬಳೇ ಸಂಗೀತಕ್ಕೆ ಹಾಡುವುದು / ಕುಣಿಯುವುದು. (30 ತಿ) | |
| 7 | ಯಾರ ಸಹಾಯವೂ ಇಲ್ಲದೇ ಕಪ್ಪಿನಿಂದ ಲೋಟಕ್ಕೆ ನೀರನ್ನು ಬದಲಾಯಿಸುವುದು. (30 ತಿ) | |
| 8 | ದಾರಕ್ಕೆ ಮಧ್ಯಮ ಗಾತ್ರದ ಮಣಿಯನ್ನು ಪೋಣಿಸುವುದು. (30 ತಿ) | ಬಾ ಫ 11 |
| 9 | ಸಮವಯಸ್ಸಿನ ಮಕ್ಕಳ ಅಟದ ಚಟುವಟಿಕೆಗಳನ್ನು ನೋಡಿ ಅನುಕರಿಸುವುದು. (30 ತಿ) | |
| 10 | ನರ್ಸರಿ ಆಟದಲ್ಲಿ ತನ್ನ ಸರದಿಗೋಸ್ಕರ ಕಾಯುವುದು. (36 ತಿ) | |
| 11 | ಸೋಪಿನ ನೀರನ್ನು ಕೊಳವೆಯ ಮೂಲಕ ಗುಳ್ಳೆ ಬರುವ ಹಾಗೆ ಊದುವುದು. (36 ತಿ) | |
| 12 | ಜಾರು ಬಂಡೆಯಲ್ಲಿ ಜಾರುವುದು. (36 ತಿ) | |
| 13 | ಕುಳಿತುಕೊಂಡು ಉಯ್ಯಾಲೆ ಆಡುವುದು. (36 ತಿ) | |
| 14 | ಚೆಂಡಿನಿಂದ ಗುರಿಯಿಟ್ಟು ದೂರದಲ್ಲಿರುವ ವಸ್ತುವಿಗೆ ಹೊಡೆಯುವುದು. (36 ತಿ) | ಬಾ ಫ 27 |
| 15 | ಕೇರಮ್ ಬೋರ್ಡ್‌ಆಟದಲ್ಲಿ ಪಾನ್‌ಗಳನ್ನು ಗುರಿಯಿಂದ ಹೊಡೆಯುವುದು. (36ತಿ) | ಶಾ ಪೂ ಫ 28 |
| 16 | ವಿವಿಧ ವಸ್ತುಗಳ ಅಚ್ಚನ್ನು ಇಂಕಿನಿಂದ ಅಥವಾ ಬಣ್ಣದಲ್ಲಿ ಅದ್ದಿ ಒತ್ತುವುದು. (42 ತಿ) | ಶಾ ಪೂ ಫ 41 |
| 17 | ಆಟದ ಸಾಮಾನುಗಳ ಅಥವಾ ಗೊಂಬೆಗಳ ಜೊತೆ ಆಡುವುದು. (42 ತಿ) | ಬಾ ಫ 26, ಶಾ ಪೂ ಫ 32, |
| 18 | ಸೀಟಿ ಊದುವುದು. (42 ತಿ) | ಬಾ ಫ 23 |
| 19 | ಮೇಜಿನ ಕೆಳಗೆ ಅಥವಾ ಕುರ್ಚಿಯ ಕೆಳಗೆ ನುಗ್ಗಿ ಆಡುವುದು. (42 ತಿ) | |
| 20 | ಆಟದಲ್ಲಿ ಜೊತೆಗಾರರನ್ನು, ಆಟದ ಸಾಮಾನುಗಳನ್ನು ಅಥವಾ ಪ್ರಾಣಿಗಳನ್ನು ಬೈಯುವುದು. (42 ತಿ) | |
| 21 | ಸಮೂಹ ಗಾನಕ್ಕೆ ಅಥವಾ ಹಾಡಿಗೆ ಚಪ್ಪಾಳೆ ತಟ್ಟಿಕುಣಿಯುವುದು ಅಥವಾ ಹಾಡುವುದು. (42 ತಿ) | |
| 22 | ಠಕ್ಕು ಮಾಡಿ ಪ್ರಾಣಿಗಳ ಹಾಗೆ ನಾಲ್ಕು ಕಾಲಿನಿಂದ ತೆವಳುವುದು, ಶಬ್ದಮಾಡುವುದು/ಅಭಿನಯಿಸಿವುದು. (42 ತಿ) | |
| 23 | ಸ್ವಂತಕ್ಕೆ ಸೇರಿದ ವಸ್ತುಗಳನ್ನು ಬೇರೆಯವರೊಂದಿಗೆ ಹಂಚಿಕೂಳ್ಳುವುದು. (42 ತಿ) | ಶಾ ಪೂ ಫ 28-30 |
| 24 | ನರ್ಸರಿಯ ಅಂತ್ಯ ಪ್ರಾಸಗಳನ್ನು ಅಭಿನಯಿಸುವುದು. (48 ತಿ) | |
| 25 | ನಿಬಂಧನೆಗಳುಳ್ಳ ಆಟಗಳಲ್ಲಿ ಜೊತೆಗಾರರ ಜೊತೆ ಅನುಕರಿಸಿ ಅಡುವುದು. (48ತಿ) | |
| 25 | ಕಪ್ಪೆ ಜಿಗಿತದ ಆಟವನ್ನು ಆಡುವುದು. (48 ತಿ) | |

| | | |
|---|---|---|
| 26 | ತನ್ನನ್ನು ತಾನು ನೂಕಿಕೊಂಡು ನಿಂತಿರುವ ಸ್ಥಳದಲ್ಲೇ ಉಯ್ಯಾಲೆ ಆಡುವುದು. (48 ತಿ) | |
| 27 | ತನ್ನ ಆಟದ ಸಾಮಗ್ರಿಗಳನ್ನು ಗುರುತು ಹಿಡಿದು ಮತ್ತು ಅದನ್ನು ಜೋಪಾನ ಮಾಡುವುದು. (48 ತಿ) | |
| 28 | ಕೇರಮ್ ಆಟದಲ್ಲಿ ಪಾನ್‌ಗಳನ್ನು ಗುರಿಯಿಟ್ಟು ಪೌಚಿನಲ್ಲಿ ಬೀಳಿಸುವುದು. (48 ತಿ) | ಶಾ ಪೂ ಘ 28 |
| 29 | ಬೆಂಕಿ ಕಡ್ಡಿಗಳನ್ನು ಉಪಯೋಗಿಸಿ ರೇಖಾ ಚಿತ್ರಗಳ ಆಕಾರಗಳನ್ನು ರಚಿಸುವುದು. (48 ತಿ) | |
| 30 | ಕಂಬಿ ಹಿಡಿದು ಸುಮಾರು 30 ಸೆಕೆಂಡುಗಳ ಕಾಲ ನೇತಾಡುವುದು. (48 ತಿ) | |
| 31 | ಆಸನಗಳ ರೀತಿ ಅಥವಾ ಡ್ರಿಲ್ಲಿನ ರೀತಿ ಚಲನಾತ್ಮಕ ಸರಣಿಗಳನ್ನು ಅನುಕರಿಸುವುದು. (48 ತಿ) | |
| 32 | ತನ್ನ ಆಟದ ಸಾಮಾನುಗಳನ್ನು ಜೊತೆಗಾರರಿಗೆ ಅಥವಾ ಮನೆಗೆ ಬಂದ ಅತಿಥಿಗಳಿಗೆ ತೋರಿಸುವುದು/ಕೊಡುವುದು. (48 ತಿ) | |
| 33 | ಜೊತೆಗಾರರನ್ನು ಹಿಡಿಯಲು ಓಡುವುದು. (48 ತಿ) | |
| 34 | ಮೂರು ಚಕ್ರದ ಸೈಕಲ್ ತುಳಿಯುವುದು. (54 ತಿ) | ಶಾ ಪೂ ಘ 50 |
| 35 | ಕ್ಷಣ್ಣಾಮುಚ್ಚಾಲೆ ಆಟವನ್ನು ಆಡುವುದು. (60 ತಿ) | |
| 36 | ಆಟದಲ್ಲಿ ತಾಯಿಯ, ತಂದೆಯ, ಉಪಾಧ್ಯಾಯರ ರೀತಿ ಆಟ ಆಡುವುದು. (60 ತಿ) | |
| 37 | ಗಪ್ಪನೆ ನಿಲ್ಲುವ/ಅಥವಾ ಶಿಲೆಯಂತೆ ನಿಲ್ಲುವ ಅಲುಗಾಡದೆ ನಿಲ್ಲುವ ರೀತಿ ಆಟಗಳನ್ನು ಆಡುವುದು. (60 ತಿ) | |
| 38 | ಆಟ ಆಡುವಾಗ ರಹಸ್ಯವನ್ನು ಕಾಪಾಡುವುದು. (60 ತಿ) | |
| 39 | ಕಣ್ಣಿಗೆ ಬಟ್ಟೆ ಕಟ್ಟಿ ಆಡುವುದು. (60 ತಿ) | |
| 40 | ಆಟ ಆಡುವಾಗ ಕಿರಿಯರಿಗೆ ಅಥವಾ ಜೊತೆಗಾರರಿಗೆ ಸಲಹೆ/ನಿರ್ದೇಶನಗಳನ್ನು ಕೊಡುವುದು. (66 ತಿ) | |
| 41 | ಕಾಗದದಿಂದ ವಿಮಾನ, ಹಡಗುಗಳು ಮತ್ತು ಪರಿಚಯದ ವಸ್ತುಗಳನ್ನು ಮಾಡುವುದು. (66 ತಿ) | |
| 42 | ಗೋಲಿ ಆಟದಲ್ಲಿ ಚೆನ್ನಾಗಿ ಗುರಿಯಿಡುವುದು. (72 ತಿ) | ಶಾ ಪೂ ಘ 31 |
| 43 | ನೆಲದಲ್ಲಿ ಬಂದಿರುವ ಆಕಾರದ ರೀತಿ ಆಟ ಆಡುವುದು.(HOP SCOTCH) (72ತಿ) | |
| 44 | ಆಟದ ನಿಯಮಗಳನ್ನು ಉಲ್ಲಂಘಿಸಿದಾಗ ಕಂಡು ಹಿಡಿಯುವುದು. (72 ತಿ) | |
| 45 | ಕೈಯಲ್ಲಿ ಎಲೆ ಹಿಡಿದು ಇಸ್ಪೀಟ್ ಆಟದ ರೀತಿ ಆಡುವುದು. (72 ತಿ) | ಶಾ ಪೂ ಘ 19 |
| 46 | ಆಟ ಆಡುವಾಗ ತನಗೂ ಮತ್ತು ಬೇರೆಯವರಿಗೂ ಬೇಕಾಗುವಂತಹ ರಕ್ಷಣೆಗಳನ್ನು ಕಾಪಾಡುವುದು. (72 ತಿ) | |
| 47 | ಆಟದಲ್ಲಿ ಸುಮ್ಮನೆ ಮೋಸ ಮಾಡುವುದರ ಮೂಲಕ ಉಲ್ಲಾಸ ಭರಿತರಾಗುವುದು. (72 ತಿ) | |
| 48 | ಬಿಡುವಿನ ವೇಳೆಯಲ್ಲಿ ಯಾವುದಾದರೂ ಉಪಯೋಗಕಾರಿ ಕೆಲಸದಲ್ಲಿ ತನ್ನನ್ನು ತಾನು ತೊಡಗಿಸಿಕೊಳ್ಳುವುದು. (72 ತಿ) | |
| 50 | ತಲೆಯ ಮೇಲೆ ಪುಸ್ತಕವನ್ನಿಟ್ಟುಕೊಂಡು ಸಮತೋಲನವಾಗಿ ನಡೆಯುವುದು. (72 ತಿ) | ಶಿ ಘ 3 |

ಶಿ. ಘ. : ಶಿಶು ಘಟಕ : ಬಾ. ಘ. ಬಾಲ್ಯ ಘಟಕ : ಶಾ. ಪೂ. ಘ : ಶಾಲಾಪೂರ್ವ ಘಟಕ



ಸೂಕ್ಷ್ಮ ಚಲನೆ ೨೩ : ಬೀಗದ ಕೈಯನ್ನು ಬೀಗದ ಕಿಂಡಿಗೆ ಹಾಕುವುದು



ಸೂಕ್ಷ್ಮ ಚಲನೆ ೨೪ : ಬಟ್ಟೆಯ ಅಥವಾ ಚರ್ಮದ ವಸ್ತುಗಳ ಜಿಪ್ಪನ್ನು ಹಾಕುವುದು



ಸೂಕ್ಷ್ಮ ಚಲನೆ ೨೫ : ಕೈ ಚೌಕವನ್ನು ನಾಲ್ಕು ಮಡಿಕೆ ಮಡಿಸುವುದು



ಸೂಕ್ಷ್ಮ ಚಲನೆ ೨೬ : ನಟ್ಟು ಬೋಲ್ಟುಗಳನ್ನು ತಿರುಗಿಸಿ ಹಾಕುವುದು



ಸೂಕ್ಷ್ಮ ಚಲನೆ ೩೬ : ಪೆನ್ಸಿಲ್ ಮತ್ತು ಮೆಂಡರನ್ನು ಬಳಸುವುದು



ಸೂಕ್ಷ್ಮ ಚಲನೆ ೪೬ : ಮಧ್ಯಮ ಸಮದ ಸೂಜಿಗೆ ದಾರವನ್ನು ಪೋಣಿಸುವುದು



ಸೂಕ್ಷ್ಮ ಚಲನೆ ೪೭ : ಕತ್ತರಿಯನ್ನು ಉಪಯೋಗಿಸಿಕೊಂಡು ಆಕೃತಿಗಳನ್ನು ಕತ್ತರಿಸುವುದು




ಸೂಕ್ಷ್ಮ ಚಲನೆ ೪೮ : ಒದ್ದೆ ಬಟ್ಟೆಯನ್ನು ಹಿಂಡುವುದು

| ಸಂಖ್ಯೆ | ಸ್ವಸಹಾಯ ಚಟುವಟಿಕೆಗಳು | ಆಟಿಕೆಯ ಸೂಚ್ಯ |
|---|---|---|
| ತಿನ್ನುವುದು | | |
| 1. | ಜೊಲ್ಲು ಸುರಿಸುವುದನ್ನು ತಡೆದುಕೊಳ್ಳುವುದು. (12 ತಿ) | ಶಿ ಘ 3 |
| 2. | ತಿನ್ನುವ ಮತ್ತು ತಿನ್ನಬಾರದ ವಸ್ತುಗಳ ಬಗ್ಗೆ ತಿಳುವಳಿಕೆಯಿರುವುದು. (12 ತಿ) | |
| 3. | ಕಪ್ಪು ಮತ್ತು ಲೋಟದಿಂದ ಕುಡಿಯುವುದು. (12 ತಿ) | |
| 4. | ಗಟ್ಟಿ ಪದಾರ್ಥಗಳನ್ನು ಅಗಿಯುವುದು (ಅಂದರೆ ಬಿಸ್ಕೆಟ್, ಚಾಕ್ಲೇಟ್, ಟಾಫಿಗಳು) (15 ತಿ) | |
| 5. | ಬೆರಳುಗಳಿಂದ ಗಟ್ಟಿ ಪದಾರ್ಥಗಳನ್ನು ಬಾಯಿಗೆ ಹಾಕಿಕೂಳ್ಳುವುದು. (18 ತಿ) | |
| 6. | ಚಾಕ್ಲೇಟ್‌ಗೆ ಸುತ್ತಿರುವ ಕಾಗದಗಳನ್ನು ಬಿಚ್ಚಿ ತಿನ್ನುವುದು. (24 ತಿ) | |
| 7. | ಹಣ್ಣುಗಳನ್ನು ಬೀಜಗಳಿಂದ ಬೇರ್ಪಡಿಸಿ ತಿನ್ನುವ ಸಾಮರ್ಥ್ಯ ಹೊಂದಿರುವುದು (ಕಲ್ಲಂಗಡಿ ಹಣ್ಣು) (24 ತಿ) | |
| 8. | ಕೆಲವು ನಿಮಿಷಗಳವರೆಗೆ ಬಾಯಿಯಲ್ಲಿ ನೀರನ್ನು ಇಟ್ಟು ಕೊಳ್ಳುವುದು. (30 ತಿ) | |
| 9. | ಬಾಳೇಹಣ್ಣು/ಕಿತ್ತಳೆ ಹಣ್ಣುಗಳ ಸಿಪ್ಪೆಯನ್ನು ಸುಲಿಯುವುದು. (36 ತಿ) | |
| 10. | ಬಾಯಿಯಲ್ಲಿ ನೀರನ್ನು ತುಂಬಿಕೊಂಡು ಚಿಲುಮೆಯ ರೀತಿ ಉಗುಳುವುದು. (36 ತಿ) | |
| 11. | ಬೆರಳುಗಳಿಂದ ಅಹಾರವನ್ನು ತೆಗೆದುಕೊಂಡು ತನ್ನ ಬಾಯಿಗೆ ಹಾಕಿಕೊಳ್ಳುವುದು. (36 ತಿ) | |
| 12. | ಊದುವುದು. (36 ತಿ) | ಬಾ ಘ 21-22 |
| 13. | ಅನ್ನವನ್ನು ಕೈಯಿಂದ ಕಲೆಸುವುದು. (42 ತಿ) | |
| 14. | ಸ್ಟ್ರಾ ಪೈಪಿನಿಂದ ನೀರು ಅಥವಾ ಹಣ್ಣಿನ ರಸವನ್ನು ಹೀರಿಕೊಳ್ಳುವುದು. (42 ತಿ) | ಬಾ ಘ 25 |
| 15. | ನೀರನ್ನು ಉಗುಳುವುದು. (42 ತಿ) | |
| 16. | ನೀರು, ಹಾಲು ಅಥವಾ ಹಣ್ಣಿನ ರಸವನ್ನು ಗುಟುಕರಿಸುವುದು. (42 ತಿ) | |
| 17. | ಚಮಚದಿಂದ ತಿನ್ನುವುದು. (42 ತಿ) | |
| 18. | ಸಾರ್ವಜನಿಕ ಸ್ಥಳಗಳಲ್ಲಿ ತಿನ್ನುವಾಗ ಸಭ್ಯತೆಯಿಂದ ನಡೆದುಕೊಳ್ಳುವುದು. (66 ತಿ) | |
| 19. | ಚಾಕು ಮತ್ತು ಮುಳ್ಳು ಚಮಚವನ್ನು ಬಳಸುವುದು. (72 ತಿ) | |
| ಉಡುಪು ಧರಿಸುವುದು | | |
| 20. | ತಲೆಯ ವಸ್ತ್ರವನ್ನು ತೆಗೆಯುವುದು. (9 ತಿ) | |
| 21. | ಗುಂಡಿ ಬಿಚ್ಚಿದರೆ ಬಟ್ಟೆಯನ್ನು ಕಳೆಯುವುದು. (24 ತಿ) | |
| 22. | ಕಾಲ್ಚೀಲವನ್ನು ತೆಗೆಯುವುದು. (24 ತಿ) | |
| 23. | ಇಲಾಸ್ಟಿಕ್ ಪಟ್ಟಿ ಇರುವ ಪ್ಯಾಂಟ್ ಮತ್ತು ಚಡ್ಡಿಯನ್ನು ಕಳಚುವುದು/ಹಾಕುವುದು. (30 ತಿ) | |
| 24. | ಬಟ್ಟೆಗೆ ಗುಂಡಿ ಹಾಕುವುದು/ತೆಗೆಯುವುದು. (36 ತಿ) | ಬಾ ಘ 6 |
| 25. | ಇಲಾಸ್ಟಿಕ್ ಇರುವ ಒಳಗಿನ ಮತ್ತು ಹೊರಗಿನ ವಸ್ತ್ರಗಳನ್ನು ಬಿಚ್ಚುವುದು. (36 ತಿ) | |





| | | |
|---|---|---|
| 26. | ಬೂಟು, ಚಪ್ಪಲಿ ಮತ್ತು ವಾಚಿನ ಕೊಂಡಿಯನ್ನು ಹಾಕುವುದು. (48 ತಿ) | ಬಾ ಘ 6 |
| 27. | ಕಾಲ್ಚೀಲವನ್ನು ಹಾಕುವುದು. (48 ತಿ) | |
| 28. | ಬಟ್ಟೆಯ ಗುಂಡಿಗಳನ್ನು ಹಾಕುವುದು. (48 ತಿ) | ಬಾ ಘ 6 |
| 29. | ಮುಖಕ್ಕೆ ಪೌಡರ್ ಮತ್ತು ಕ್ರೀಂಗಳನ್ನು ಹಚ್ಚಿಕೊಳ್ಳುವುದು (48 ತಿ) | |
| 30. | ತಲೆಯಿಂದ ಹಾಕಿಕೊಳ್ಳುವ ವಸ್ತ್ರಗಳನ್ನು ಹಾಕಿಕೊಳ್ಳುವುದು.<br>(ಫ್ರಾಕ್, ಬನಿಯನ್‌ಗಳು ಟೀಶರ್ಟ್). (48 ತಿ) | |
| 31. | ತನ್ನ ಸ್ವಂತ ಬಟ್ಟೆಗೆ ಬಟ್ಟೆ ಪಿನ್ನನ್ನು ಬಳಸುವುದು. (60 ತಿ) | ಶಾ ಪೂ ಘ 6 |
| 32. | ಬೂಟು ಲೇಸಿನ ಗಂಟುಗಳು ಮತ್ತು ಸಾಮಾನ್ಯ ಗಂಟುಗಳನ್ನು ಹಾಕುವುದು. (66 ತಿ) | ಬಾ ಘ 7 |
| 33. | ತಲೆ ಬಾಚಿಕೊಳ್ಳುವುದು. (66 ತಿ) | |
| 34 | ಬಟ್ಟೆ ಒಗೆಯುವುದಕ್ಕೆ ಬದಲಾಯಿಸಲು ಅರ್ಥ ಮಾಡಿಕೊಳ್ಳುವುದು. (72 ತಿ) | |
| **ಶೌಚಾಲಯ ಕಾರ್ಯಚಟುವಟಿಕೆ** | | |
| 35. | ಶೌಚಾಲಯಕ್ಕೆ ಹೋಗುವುದನ್ನು ಸ್ಥಿರವಾಗಿ ಸನ್ನೆಯಲ್ಲಿ/ಪದದಲ್ಲಿ ಹೇಳುವುದು/ ತೋರಿಸುವುದು. (24 ತಿ) | |
| 36. | ಸ್ವತ: ಸರಿಯಾಗಿ ಕಾಲೂರಿ ಶೌಚಾಲಯದಲ್ಲಿ ಕೂರುವುದು. (24 ತಿ) | |
| 37. | ಕೈ ಚೌಕದಿಂದ ಮುಖ / ಕೈ ಒರೆಸಿಕೊಳ್ಳುವುದು. (24 ತಿ) | |
| 38. | ಸೋಪು ಹಚ್ಚಿಕೊಂಡು ಕೈ ತೊಳೆದುಕೊಳ್ಳುವುದು. (24 ತಿ) | |
| 39. | ನೀರು ಹಾಕಿಕೊಟ್ಟರೆ ಸ್ವತ: ಶೌಚಾಲಯದ ನಂತರ ಶುಚಿಗೊಳಿಸಿಕೊಳ್ಳುವುದು. (36 ತಿ) | |
| 40. | ಮೂಗನ್ನು ಊದುವುದು/ಒರೆಸುವುದು/ಸ್ವಚ್ಛ ಮಾಡುವುದು. (36 ತಿ) | |
| 41. | ಸ್ವತ: ಶೌಚಾಲಯದಲ್ಲಿ ತೊಳೆದುಕೊಳ್ಳುವುದು. (66 ತಿ) | |
| **ಹಲ್ಲನ್ನು ಉಜ್ಜುವ ಅಥವಾ ಹಲ್ಲು ಶುಚಿಗೊಳಿಸುವಿಕೆ** | | |
| 42. | ಹಲ್ಲನ್ನು ಉಜ್ಜುವುದು (30 ತಿ) | |
| 43. | ನಾಲಗೆಯನ್ನು ಸ್ವಚ್ಛ ಗೊಳಿಸುವುದು. (36 ತಿ) | |
| 44. | ಹಲ್ಲುಜ್ಜುವ ಬ್ರಷ್‌ಗೆ ಪೇಸ್ಟ್ ಹಾಕುವುದು. (42 ತಿ) | |
| **ಸ್ನಾನದ ಚಟುವಟಿಕೆ** | | |
| 45. | ಸ್ನಾನ ಮಾಡುವುದಕ್ಕೆ ಸ್ವತ: ನೀರು ಹಾಕಿಕೊಳ್ಳುವುದು. (48 ತಿ) | |
| 46. | ಟವೆಲಿನಿಂದ ಮೈ ಒರೆಸಿಕೊಳ್ಳುವುದು. (48 ತಿ) | |
| 47. | ಸೋಪ್ ಹಾಕಿ ನೀರಿನಿಂದ ಮುಖ ತೊಳೆದುಕೊಳ್ಳುವುದು. (60 ತಿ) | |
| 48. | ಸಹಾಯ ಪಡೆದು ಸ್ವತ: ಸ್ನಾನ ಮಾಡಿಕೊಳ್ಳುವುದು. (66 ತಿ) | |
| 49 | ದೇಹಕ್ಕೆ ಸೋಪ್ ಹಚ್ಚುವುದು. (66 ತಿ) | |
| 50 | ಸ್ವತ: ಯಾರ ಸಹಾಯವೂ ಇಲ್ಲದೇ ಸ್ನಾನ ಮಾಡುವುದು. (72 ತಿ) | |

ಶಿ. ಘ. : ಶಿಶು ಘಟಕ : ಬಾ. ಘ. ಬಾಲ್ಯ ಘಟಕ : ಶಾ. ಪೂ. ಘ : ಶಾಲಾಪೂರ್ವ ಘಟಕ



ಸೂಕ್ಷ್ಮ ಚಲನೆ ೪೯ : ಇಸ್ಪೀಟ್‌ಎಲೆಗಳನ್ನು ಕ್ರಮಬದ್ಧವಾಗಿ ಜೋಡಿಸಿ ಕೈಯಲ್ಲಿ ಹಿಡಿಯುವ ಸಾಮರ್ಥ್ಯ



ಸಂವಹನ ೧೫ : ದೇಹದ ಐದು ಭಾಗಗಳನ್ನು ತೋರಿಸುವುದು



ಸಂವಹನ ೩೬ : ಚಿಕ್ಕದಾದ ವಿಧೇಯತೆಯ ಸೂಚಕ ಪದಗಳನ್ನು ಉಪಯೋಗಿಸುವುದು ಉದಾ: ಧನ್ಯವಾದ, ನಮಸ್ಕಾರ ಇತ್ಯಾದಿ



ಆಟದ ಚಟುವಟಿಕೆಗಳು ೯ : ಸಮವಯಸ್ಸಿನ ಬೇರೆ ಮಕ್ಕಳ ಆಟದ ಚಟುವಟಿಕೆಗಳನ್ನು ನೋಡಿ ಅನುಕರಿಸುವುದು



ಆಟದ ಚಟುವಟಿಕೆಗಳು ೧೨ : ಜಾರು ಬಂಡೆಯಲ್ಲಿ ಜಾರುವುದು



ಆಟದ ಚಟುವಟಿಕೆಗಳು ೧೬ : ವಿವಿಧ ಬಣ್ಣಗಳ ಅಚ್ಚನ್ನು ಇಂಕಿನಿಂದ ಅಥವಾ ಬಣ್ಣದಿಂದ ಅದ್ದಿ ಒತ್ತುವುದು



ಆಟದ ಚಟುವಟಿಕೆಗಳು ೧೮ : ಕ್ಯಾಂಡಲುಗಳನ್ನು ಊದುವುದು



ಆಟದ ಚಟುವಟಿಕೆಗಳು ೨೪ : ನರ್ಸರಿಯ ಪ್ರಾಸಗಳನ್ನು ಅಭಿನಯಿಸುವುದು

| ಸಂಖ್ಯೆ | ಅರಿವಿನ ಚಟುವಟಿಕೆಗಳು (ಅರಿ) | ಆಟಿಕೆಯ ಸೂಚ್ಯ |
|---|---|---|
| **ಗಡಿಯಾರ ಮತ್ತು ಸಮಯ** | | |
| 1. | ಬೆಳಕು ಮತ್ತು ಕತ್ತಲೆಯ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. (36 ತಿ) | |
| 2. | ಗಡಿಯಾರಕ್ಕೆ ಸಮಯವನ್ನು ಹೊಂದಿಸುವುದು. (36 ತಿ) | |
| 3. | ಈಗ ಮತ್ತು ಅಮೇಲೆ–ಇವುಗಳ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. (36 ತಿ) | |
| 4. | ಹಗಲು ಮತ್ತು ರಾತ್ರಿಯ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. (40 ತಿ) | |
| 5 | ಬೆಳಿಗ್ಗೆ ಮತ್ತು ಸಾಯಂಕಾಲದ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. (44 ತಿ) | |
| 6. | ಗಡಿಯಾರದ ಸಣ್ಣ ಮುಳ್ಳಿನಿಂದ ಗಂಟೆಯ ಸಮಯವನ್ನು ಹೇಳುವುದು. (60 ತಿ) | |
| 7. | ಬೆಳಗಿನ ತಿಂಡಿ, ಮಧ್ಯಾಹ್ನದ ಊಟ ಮತ್ತು ರಾತ್ರಿಯ ಊಟದ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. (60 ತಿ) | |
| 8. | ನಿನ್ನೆ, ಈ ದಿನ ಮತ್ತು ನಾಳೆಯ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. (72 ತಿ) | |
| 9. | ಐದು ಅಂಕಿಗಳನ್ನು ಕೂಡಿಸಿ ಎಣಿಸುವುದು. (72 ತಿ) | |
| **ಕ್ಯಾಲೆಂಡರ್** | | |
| 10. | ವಾರದ ದಿನಗಳನ್ನು ಬಾಯಿ ಪಾಠದಿಂದ ಹೇಳುವುದು. (60 ತಿ) | |
| 11. | ವಾರದ ದಿನಗಳ ಬಾಯಿ ಪಾಠವಾದ ಮೇಲೆ ಸೋಮವಾರದ ನಂತರ ಯಾವ ವಾರ ಎಂದು ಪರೀಕ್ಷಿಸಿದಾಗ ಹೇಳುವುದು. (66 ತಿ) | |
| 12. | ವರ್ಷದ ತಿಂಗಳನ್ನು ಬಾಯಿ ಪಾಠದಿಂದ ಹೇಳುವುದು. (66 ತಿ) | |
| 13. | ವರ್ಷದ ತಿಂಗಳ ಬಾಯಿ ಪಾಠವಾದ ಮೇಲೆ ಜನವರಿಯ ನಂತರ ಯಾವ ತಿಂಗಳು ಎಂದು ಪರೀಕ್ಷಿಸಿದಾಗ ಹೇಳುವುದು. (66 ತಿ) | |
| 14. | ವಾರದ ದಿನಗಳ ಬಾಯಿ ಪಾಠವಾಗುವಾಗ ಮಂಗಳವಾರದ ಹಿಂದೆ ಯಾವ ವಾರ ಎಂದು ಪರೀಕ್ಷಿಸಿದಾಗ ಹೇಳುವುದು. (72 ತಿ) | |
| 15. | ವರ್ಷದ ತಿಂಗಳ ಬಾಯಿ ಪಾಠವಾಗುವುದಕ್ಕಿಂತ ಮೊದಲು ಪರೀಕ್ಷಿಸುವುದು. (72ತಿ) | |
| 16. | ವರ್ಷದ ಮಾಸಗಳನ್ನು (ಕಾಲ) ಹೇಳುವುದು. (72 ತಿ) | |
| 17. | ದಿನಗಳನ್ನು ಗುರುತಿಸುವುದು/ಹೆಸರಿಸುವುದು (ಇವತ್ತು ಯಾವ ವಾರ) (72 ತಿ) | |
| 18. | ಕ್ಯಾಲೆಂಡರನ್ನು ಓದುತ್ತಾ ನಿರ್ದಿಷ್ಟವಾದ ದಿನಗಳನ್ನು ಹೆಸರಿಸುವುದು ಮತ್ತು ಗುರುತಿಸುವುದು (72 ತಿ) | |
| **ಹಣ** | | |
| 19. | ನೋಟುಗಳನ್ನು ಮತ್ತು ನಾಣ್ಯಗಳನ್ನು ಹಣ ಎಂದು ಗುರುತಿಸಿ ರಕ್ಷಿಸುವುದು. (24ತಿ) | ಶಾ ಪೂ ಘ 26 |
| 20. | ಬೇರೆ ಲೋಹದ ವಸ್ತುಗಳಿಂದ ನಾಣ್ಯಗಳನ್ನು ಬೇರ್ಪಡಿಸುವುದು. (30 ತಿ) | ಶಾ ಪೂ ಘ 26 |
| 21. | ಹಣದಿಂದ ವಸ್ತುಗಳನ್ನು ಖರೀದಿಸಬಹುದೆಂದು ತಿಳಿದಿರುವುದು. (36 ತಿ) | ಶಾ ಪೂ ಘ 26 |
| 22. | ಚಿಕ್ಕ ಮತ್ತು ದೊಡ್ಡದಾದ ನಾಣ್ಯಗಳ ನಡುವಿನ ವ್ಯತ್ಯಾಸವನ್ನು ಅರಿತಿರುವುದು. (48 ತಿ) | ಶಾ ಪೂ ಘ 26 |

| | | |
|---|---|---|
| 23. | ಸಮೀಪದ ಅಂಗಡಿಗಳಿಗೆ ಸಣ್ಣ ಸಾಮಾನು ಕೊಳ್ಳಲು ಹೋಗುವುದು. (48 ತಿ) | ಶಾ ಪೂ ಘ 26 |
| 24. | ನೋಟು ಮತ್ತು ನಾಣ್ಯಗಳ ನಡುವಿನ ವ್ಯತ್ಯಾಸವನ್ನು ತಿಳಿದಿರುವುದು. (48 ತಿ) | ಶಾ ಪೂ ಘ 26 |
| 25. | ನೋಟು ಮತ್ತು ನಾಣ್ಯಗಳ ಮೌಲ್ಯವನ್ನು ಓದುವುದು. (60 ತಿ) | ಶಾ ಪೂ ಘ 26 |
| 26. | ನಾಣ್ಯಗಳ ಬೆಲೆಯನ್ನು ತಿಳಿದಿರುವುದು. (66 ತಿ) | ಶಾ ಪೂ ಘ 26 |
| 27. | ಒಂದು ರೂಪಾಯಿಗಿಂತ ಕಡಿಮೆ ಇರುವ ನಾಣ್ಯಗಳನ್ನು ಕೂಡಿಸುವುದು. (72 ತಿ) | ಶಾ ಪೂ ಘ 26 |
| 28. | ಮೂರು ನಾಲ್ಕು ವಸ್ತುವಿರುವ ಸಾಮಾನು ಪಟ್ಟಿಯನ್ನು ತೋರಿಸಿ ಅಂಗಡಿಯಿಂದ ಖರೀದಿಸುವುದು. (72 ತಿ) | ಶಾ ಪೂ ಘ 26 |
| **ಸಾಮಾನ್ಯ** | | |
| 29. | 2 ವಸ್ತುಗಳನ್ನು ಹೊಂದಿಸುವುದು. (24 ತಿ) | |
| 30. | ಚಿತ್ರಗಳಿಗೆ ವಸ್ತುಗಳನ್ನು ಹೊಂದಿಸುವುದು ಅಥವಾ ವಸ್ತುಗಳಿಗೆ ಚಿತ್ರಗಳನ್ನು ಹೊಂದಿಸುವುದು. (24 ತಿ) | |
| 31. | ದ್ರವ ಪದಾರ್ಥಗಳನ್ನು ಕಡಿಮೆ ಮತ್ತು ಹೆಚ್ಚು ಎಂಬುದರ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. (30 ತಿ) | |
| 32. | ತೆರೆಯುವುದು ಮತ್ತು ಮುಚ್ಚುವುದರ ಉಪಯೋಗವನ್ನು ಅರ್ಥ ಮಾಡಿಕೊಳ್ಳುವುದು/ಬಳಸುವುದು. (36 ತಿ) | |
| 33. | ಪ್ರಾಥಮಿಕ ಬಣ್ಣಗಳನ್ನು ಗುರುತಿಸುವುದು. (36 ತಿ) | ಶಾ ಪೂ ಘ 49 |
| 34. | ಪ್ರಾಥಮಿಕ ಆಕಾರಗಳನ್ನು ಗುರುತಿಸುವುದು. (36 ತಿ) | ಶಾ ಪೂ ಘ 48 |
| 35. | ವಿವಿಧ ಬಗೆಯ ಅಳತೆಗಳನ್ನು ಆರೋಹಣ ಅವರೋಹಣ ಕ್ರಮದಲ್ಲಿ ಜೋಡಿಸುವುದು. (36 ತಿ) | ಶಾ ಪೂ ಘ 47 |
| 36. | 5 ವಸ್ತುಗಳನ್ನು ಹೇಳಿದ ಮೇಳೆ ನಾಲ್ಕನ್ನಾದರೂ ಪುನರ್ ಜ್ಞಾಪಿಸಿಕೊಳ್ಳುವುದು. (36 ತಿ) | |
| 37. | ಲಿಂಗಗಳ ವ್ಯತ್ಯಾಸವನ್ನು ತಿಳಿದಿರುವುದು (ಹುಡುಗ, ಹುಡುಗಿ). (36 ತಿ) | |
| 38. | ಕ್ರಿಯಾಬದ್ಧ ಚಟುವಟಿಕೆಗಳಲ್ಲಿ ಅಥವಾ ಕಥೆಗಳನ್ನು ಅರ್ಥಪೂರ್ಣವಾಗಿ ಅಥವಾ ಸುಸಂಬದ್ಧವಾಗಿ ಜೋಡಿಸುವುದು. (48 ತಿ) | ಬಾ ಘ 18 |
| 39. | ಎರಡು ಅಳತೆಗಳ ನಡುವಿನ ವ್ಯತ್ಯಾಸವನ್ನು ಗುರುತಿಸುವುದು. (48 ತಿ) | |
| 40. | ತೆರೆಯ ಹಿಂದೆ ಪರೀಕ್ಷಕ ತಾಳಬದ್ಧವಾಗಿ ತಟ್ಟಿದ ಚಪ್ಪಾಳೆಯನ್ನು ಪುನರಾವರ್ತಿಸುವುದು. (48 ತಿ) | |
| 41. | ಎರಡು ತೂಕಗಳನ್ನು ಹೋಲಿಸುವುದು (ಹೆಚ್ಚು ತೂಕ, ಕಡಿಮೆ ತೂಕ) (48 ತಿ) | |
| 42. | ಸೂಚಿಸಿದ ವಿವಿಧ ಕಾರ್ಯ ಚಟುವಟಿಕೆಗಳನ್ನು ಅನುಕ್ರಮವಾಗಿ ನೆರವೇರಿಸುವುದು. (48 ತಿ) | |
| 43. | ಸೌಂದರ್ಯ ಮತ್ತು ಕುರೂಪದ ನಡುವಿನ ವ್ಯತ್ಯಾಸವನ್ನು ತಿಳಿದಿರುವುದು. (60 ತಿ) | |
| 44. | ದ್ವಿತೀಯ ವರ್ಗದ ಬಣ್ಣಗಳನ್ನು ಪತ್ತೆ ಹಚ್ಚುವುದು. (60 ತಿ) | |
| 45. | ಪದಗಳ ಬಳಕೆಯನ್ನು ವ್ಯಾಖ್ಯಾನಿಸುವುದು (ಪೆನ್ ಎಂದರೇನು? ಬರೆಯುವುದಕ್ಕೆ ಬಳಸುವ ಸಾಮಗ್ರಿ). (60 ತಿ) | |

| | | |
|---|---|---|
| 46. | ಎರಡು ಪರ್ಯಾಯವಾಗಿ ಸರಣಿಯಲ್ಲಿರುವ ಚಟುವಟಿಕೆಗಳನ್ನು ಕಾರ್ಯಕ್ಷಮಿತಗೊಳಿಸುವುದು. (60 ತಿ) | |
| 47. | ಈಗ ಮತ್ತು ಆಮೇಲೆ ನಡುವಿನ ವ್ಯತ್ಯಾಸವನ್ನು ತಿಳಿದಿರುವುದು. (60 ತಿ) | |
| 48. | ಗಿಡಗಳಿಗೆ ನೀರು ಹಾಕುವುದು, ಸಾಕು ಪ್ರಾಣಿಗಳಿಗೆ ಆಹಾರ ನೀಡುವುದು. (60 ತಿ) | |
| 49. | ವಯಸ್ಸನ್ನು ಹೇಳುವುದು. (60 ತಿ) | |
| 50. | ಬಣ್ಣಗಳನ್ನು ಹೆಸರಿಸುವುದು. (66 ತಿ) | |

ಶಿ. ಘ. : ಶಿಶು ಘಟಕ : ಬಾ. ಘ. ಬಾಲ್ಯ ಘಟಕ : ಶಾ. ಪೂ. ಘ. : ಶಾಲಾಪೂರ್ವ ಘಟಕ

| ಸಂಖ್ಯೆ | ಅಧ್ಯಯನ ಪೂರ್ವ (ಅಧ್ಯ) | ಆಟಿಕೆಯ ಸೂಚ್ಯ |
|---|---|---|
| 1. | ಒಂದೇ ರೀತಿ ಇರುವ ಚಿತ್ರಗಳನ್ನು ಹೊಂದಿಸುವುದು. (36 ತಿ) | |
| 2. | ಚಿತ್ರದಲ್ಲಿರುವ ಐದು ವಸ್ತುಗಳಲ್ಲಿ ನಾಲ್ಕನ್ನಾದರೂ ಪುನರ್ ಜ್ಞಾಪಿಸಿಕೊಳ್ಳುವುದು. (48 ತಿ) | |
| 3. | ಪ್ರಾಣಿಗಳೊಳಗೊಂಡಿರುವ ಐದು ಚಿತ್ರಗಳನ್ನು ತೋರಿಸುವುದು/ ಗುರುತಿಸುವುದು/ ಓದುವುದು. (48 ತಿ) | ಬಾ ಘ 17 |
| 4. | ಆರ್ಧ ಮುಚ್ಚಿರುವ ಚಿತ್ರಗಳಿಂದ ವಸ್ತುಗಳನ್ನು ಗುರುತಿಸುವುದು. (48 ತಿ) | |
| 5. | ತನ್ನ ಹೆಸರನ್ನು ಓದುವುದು. (48 ತಿ) | |
| 6. | ವಾಹನಗಳನ್ನು ಒಳಗೊಂಡಿರುವ ಐದು ಚಿತ್ರಗಳನ್ನು ತೋರಿಸುವುದು/ ಗುರುತಿಸುವುದು/ಓದುವುದು. (48 ತಿ) | ಬಾ ಘ 17 |
| 7. | ತರಕಾರಿಗಳಿರುವ ಐದು ಚಿತ್ರಗಳನ್ನು ತೋರಿಸುವುದು/ಗುರುತಿಸುವುದು/ಓದುವುದು. (48 ತಿ) | ಬಾ ಘ 17 |
| 8. | ಪೀಠೋಪಕರಣಗಳಿರುವ ಐದು ಚಿತ್ರಗಳನ್ನು ತೋರಿಸುವುದು/ಗುರುತಿಸುವುದು/ ಓದುವುದು. (48 ತಿ) | ಬಾ ಘ 17 |
| 9. | ವ್ಯಕ್ತಿಗಳನ್ನು ಒಳಗೊಂಡಿರುವ ಐದು ಚಿತ್ರಗಳನ್ನು ತೋರಿಸುವುದು / ಗುರುತಿಸುವುದು / ಓದುವುದು. (48 ತಿ) | ಬಾ ಘ 17 |
| 10. | ಚಿತ್ರದಲ್ಲಿ ಬಿಟ್ಟು ಹೋಗಿರುವ ಅಥವಾ ಕಾಣೆಯಾದ ಭಾಗಗಳನ್ನು ಗುರುತಿಸುವುದು. (60 ತಿ) | |
| 11. | ಕ್ರಿಯೆಗಳುಳ್ಳ ಐದು ಚಿತ್ರಗಳನ್ನು ವರ್ಣಿಸುವುದು/ಅನುಕರಿಸುವುದು. (60 ತಿ) | ಬಾ ಘ 18 |
| 12. | ಜೋಡಿ ಚಿತ್ರಗಳಲ್ಲಿ ಒಂದೇ ವ್ಯತ್ಯಾಸವನ್ನು ಕಂಡುಹಿಡಿಯುವುದು/ಗುರುತಿಸುವುದು. (60 ತಿ) | |
| 13. | ಚಿತ್ರಗಳಲ್ಲಿರುವ ಅಸಂಬದ್ಧತೆಗಳನ್ನು ಕಂಡುಹಿಡಿಯುವುದು. (60 ತಿ) | |
| 14. | ಚಿತ್ರಗಳನ್ನು ಕಥೆಗಳ ಪ್ರಕಾರ ಸರಣಿಯಲ್ಲಿ ಜೋಡಿಸುವುದು. (72 ತಿ) | |

| | | |
|---|---|---|
| ಪೂರ್ವ ಬರವಣಿಗೆ | | |
| 15. | ಪೆನ್ಸಿಲ್/ಕ್ರೆಯಾನ್ಸ್ ಬರವಣಿಗೆಯ ಸಾಮಗ್ರಿಗಳನ್ನು ಸುರಕ್ಷಿತವಾಗಿ ಹಿಡಿದು ಗೀಚುವುದು. (24 ತಿ) | ಶಾ ಪೂ ಘ 8 |
| 16. | ನೇರ ಮತ್ತು ಅಡ್ಡ ಗೆರೆಗಳನ್ನು ಅನುಕರಣೆ ಮಾಡಿ ಬಿಡಿಸುವುದು. (24 ತಿ) | |
| 17. | ಕ್ರಾಸ್ ಮತ್ತು ಪ್ಲೆಸ್ ಮಾರ್ಕ್‌ಗಳನ್ನು ಆನುಕರಿಸಿ ಬರೆಯುವುದು. (24 ತಿ) | |
| 18. | ವೃತ್ತವನ್ನು ಅನುಕರಿಸಿ ಬಿಡಿಸುವುದು. (36 ತಿ) | |
| 19. | ಚೌಕಾಕೃತಿಯನ್ನು ಅನುಕರಿಸಿ ಬಿಡಿಸುವುದು. (48 ತಿ) | |
| 20. | ಒಬ್ಬ ಮನುಷ್ಯನ ಚಿತ್ರದಲ್ಲಿ ನಾಲ್ಕು ಭಾಗಗಳನ್ನಾದರೂ ಬರೆಯುವುದು. (48 ತಿ) | |
| 21. | ತ್ರಿಕೋಣವನ್ನು ಅನುಕರಿಸಿ ಬರೆಯುವುದು. (60 ತಿ) | |
| 22. | ಒಬ್ಬ ಮನುಷ್ಯನ ಚಿತ್ರದಲ್ಲಿ ಆರು ಭಾಗಗಳನ್ನಾದರೂ ಬಿಡಿಸುವುದು. (60 ತಿ) | |
| 23. | ಪೆನ್ಸಿಲನ್ನು ಉಪಯೋಗಿಸಿಕೊಂಡು ಪೇಪರಿನ ಮೇಲೆ ಸ್ವಂತ ಹಸ್ತದ ಹೊರ ಅಳತೆಯನ್ನು ಅಚ್ಚು ಇಳಿಸುವುದು/ಬಿಡಿಸುವುದು. (72 ತಿ) | |
| 24. | ತ್ರಿಕೋಣವನ್ನು ತಿರುವು ಮುರುವು ಮಾಡಿ ಬಿಡಿಸುವುದು. (72 ತಿ) | |
| ಪೂರ್ವ ಅಂಕಗಣಿತ | | |
| 25. | ಐದರವರೆಗೂ ಅಂಕಿಗಳನ್ನು ಬಾಯಿಪಾಠ ಮಾಡಿ ಹೇಳುವುದು. (36 ತಿ) | |
| 26. | ವಸ್ತುಗಳನ್ನು ಬಣ್ಣ, ಆಕಾರ, ಬಳಕೆ ಮತ್ತು ಅಳತೆಗೆ ಅನುಗುಣವಾಗಿ ಬೇರ್ಪಡಿಸುವುದು. (36 ತಿ) | |
| 27. | ಸಮಾನ ಸಂಖ್ಯೆಯ ವಸ್ತುಗಳ / ಚಿತ್ರಗಳನ್ನು ಜೋಡಿಸುವುದು. (36 ತಿ) | |
| 28. | ಎರಡು ಅಂಕಿಯ ಪ್ರಕಾರ ಮುಮ್ಮುಖವಾಗಿ ಹೇಳುವುದು (ಒಂದು ಸೆಕೆಂಡುಗಳ ವೇಗದಲ್ಲಿ ಅಂಕಿಗಳನ್ನು ಹೇಳುವುದು). (36 ತಿ) | |
| 29. | 5 ಕ್ಕಿಂತ ಕಡಿಮೆ ಇರುವ ಅಂಕಿಗಳನ್ನು ಓದುವುದು/ಗುರುತಿಸುವುದು. (48 ತಿ) | |
| 30. | ಜಾಸ್ತಿ, ಸ್ವಲ್ಪಗಳನ್ನು ಅರ್ಥಮಾಡಿಕೊಳ್ಳುವುದು/ಬಳಸುವುದು. (48 ತಿ) | |
| 31. | 9 ರ ವರೆಗೆ ಅಂಕಿಗಳನ್ನು ಬಾಯಿ ಪಾಠ ಮಾಡಿ ಹೇಳುವುದು. (48 ತಿ) | |
| 32. | ಮೊದಲು, ನಂತರ ಇವೆರಡನ್ನು ಅರ್ಥ ಮಾಡಿಕೊಳ್ಳುವುದು ಮತ್ತು ಬಳಸುವುದು. (48 ತಿ) | |
| 33. | 12 ರ ಕೆಳಗೆ ಇರುವಂತಹ ಅಂಕಿಗಳನ್ನು ಓದುವುದು ಗುರುತಿಸುವುದು. (48 ತಿ) | |
| 34. | ಮೂರು ಅಂಕಿಗಳನ್ನು ಮುಂದಕ್ಕೆ ಕ್ರಮವಾಗಿ ಪುನರ್ ಉಚ್ಚರಿಸುವುದು. (ಒಂದು ಸೆಕೆಂಡುಗಳ ವೇಗದಲ್ಲಿ ಅಂಕಿಗಳನ್ನು ಹೇಳುವುದು). (48 ತಿ) | |
| 35. | ಎರಡು ಅಂಕಿಗಳನ್ನು ಹಿಂದಕ್ಕೆ ಕ್ರಮವಾಗಿ ಪುನರ್ ಉಚ್ಚರಿಸುವುದು. (ಒಂದು ಸೆಕೆಂಡುಗಳ ವೇಗದಲ್ಲಿ ಅಂಕಿಗಳನ್ನು ಹೇಳುವುದು). (48 ತಿ) | |
| 36. | ಆರು ಅಂಕಿಗಳನ್ನು ಒಂದು ಪಗಡೆ ದಾಳವನ್ನು ಬಿಟ್ಟಾಗ ಅಂಕಿಯನ್ನು ಓದಿ ಹೇಳುವುದು. (48 ತಿ) | |
| 37. | 9 ಕ್ಕಿಂತ ಕಡಿಮೆ ಇರುವ ವಸ್ತುಗಳನ್ನು ಎಣಿಸಿ ಕೂಡುವುದು. (54 ತಿ) | |

| | | |
|---|---|---|
| 38. | 9 ಕ್ಕಿಂತ ಕಡಿಮೆ ಇರುವ ಚಿಕ್ಕ ಮತ್ತು ದೊಡ್ಡ ಅಂಕಿಗಳನ್ನು ಬೇರ್ಪಡಿಸುವುದು. (60 ತಿ) | |
| 39. | ಮೂರು ಅಂಕಿಗಳನ್ನು ಹಿಂದಕ್ಕೆ ಪುನರ್ ಉಚ್ಚರಿಸುವುದು. (60 ತಿ) | |
| 40. | 9 ಸಂಖ್ಯೆಯ ಕೆಳಗಿನ ಯಾವುದೇ ಅಂಕಿಯ ನಂತರದ ಅಂಕಿಯನ್ನು ಸೂಚಿಸುವುದು. (66 ತಿ) | |
| 41. | ಎರಡು ದಾಳವನ್ನು ಬಿಟ್ಟಾಗ ದಾಳದ ಸಂಖ್ಯೆಗಳನ್ನು ಓದಿ ಹೇಳುವುದು. (66 ತಿ) | |
| 42. | ನಾಲ್ಕು ನಾಣ್ಯಗಳ ಮೌಲ್ಯವನ್ನು ಹೆಸರಿಸುವುದು. (66 ತಿ) | |
| 43. | ಕ್ಯಾಲ್ಕ್ಯುಲೇಟರ್ ಬಳಸಿ ಏಕ ಅಂಕಿಗಳನ್ನು ಕೂಡಿಸುವುದು. (66 ತಿ) | |
| 44. | ದಾಳವನ್ನು ಬಿಟ್ಟು ದಾಳದ ಅಂಕಿಯ ಪ್ರಕಾರ ಮಣಿಯನ್ನು ನಡೆಸುವುದು. (72 ತಿ) | |
| 45. | 9 ಸಂಖ್ಯೆಗಿಂತ ಒಳಗಿನ ಅಂಕಿಗಳ ಸಾಮಾನ್ಯ ಸಾಲಿನ ಸ್ಥಾನದ ಕ್ರಮವನ್ನು ಅರ್ಥಮಾಡಿಕೊಳ್ಳುವುದು. (72 ತಿ) | |
| 46. | 10 ರಿಂದ 100 ರವರೆಗೆ ಬಾಯಿ ಪಾಠ ಮಾಡಿ ಹೇಳುವುದು. (72 ತಿ) | |
| 47. | 4 ಅಂಕಿಗಳನ್ನು ಮುಮ್ಮುಖವಾಗಿ ಹೇಳುವುದು. (72 ತಿ) | |
| 48. | ಏಕ ಅಂಕಿಗಳನ್ನು ಕೂಡಿ ಏಕ ಅಂಕಿ ಲಬ್ದ ಪಡೆಯುವ ಸಾಮರ್ಥ್ಯ. (72 ತಿ) | |
| 49. | ಏಕ ಅಂಕಿಗಳನ್ನು ಕಳೆದಾಗ ಏಕ ಅಂಕಿ ಲಬ್ದ ಪಡೆಯುವ ಸಾಮರ್ಥ್ಯ. (72 ತಿ) | |
| 50. | ದಶಕಗಳನ್ನು ಪಡೆಯದೇ ಎರಡು ಅಂಕಿಗಳನ್ನು ಕೂಡುವ ಸಾಮರ್ಥ್ಯ. (72 ತಿ) | |

ಶಿ. ಘ. : ಶಿಶು ಘಟಕ : ಬಾ. ಘ. ಬಾಲ್ಯ ಘಟಕ : ಶಾ. ಪೂ. ಘ : ಶಾಲಾಪೂರ್ವ ಘಟಕ

## ಚಟುವಟಿಕೆಯ ಗುಂಪುಗಳು

ಎ.ಸಿ.ಪಿ.ಸಿ.–ಡಿ.ಡಿ ಯಲ್ಲಿ ಸೇರಿಸಲಾಗಿರುವ 400 ಅಂಶಗಳು ಬೇರೆ ಬೇರೆ ಕ್ಷೇತ್ರಗಳಲ್ಲಿ ಬರುತ್ತದೆ. ಈ ರೀತಿ ಎ.ಸಿ.ಪಿ.ಸಿ.–ಡಿ.ಡಿಯ ಜ್ಞಾನೇಂದ್ರಿಯ ಕ್ಷೇತ್ರವು ಪ್ರತಿಕ್ರಿಯೆ, ಜ್ಞಾನೇಂದ್ರಿಯ ಚಲನೆ, ಕೇಳುವಿಕೆ, ದೃಷ್ಟಿಸುವುದು, ನೋಡುವುದು ಇತ್ಯಾದಿ ಅಂಶಗಳನ್ನು ಒಳಗೊಂಡಿದೆ. ನಿಮ್ಮ ಮಗುವು ಕೆಳಗಿನ ಪಟ್ಟಿಯಲ್ಲಿ ಹೇಳಿರುವ ಚಟುವಟಿಕೆಗಳಲ್ಲಿ ಎಷ್ಟು ಸಾಧ್ಯವೊ ಅಷ್ಟು ತರಬೇತಿ ಪಡೆಯುವಂತೆ ಗಮನವಿರಿಸಿ.

| ಕ್ಷೇತ್ರ | ವಿಭಾಗ | ತರಬೇತಿಗಾಗಿ ಕೌಶಲದ ಭಾಗ |
|---|---|---|
| ಜ್ಞಾನೇಂದ್ರಿಯ | # 1 | (ಆವರ್ತ ಪ್ರತಿಕ್ರಿಯೆ) ಪ್ರತಿಬಿಂಬಿಸುವಿಕೆ |
| | # 2 | ಜ್ಞಾನೇಂದ್ರಿಯ ಚಲನೆ |
| | # 3 | ಶ್ರವಣ : ಆಲಿಸುವುದು |
| | # 4 | ದೃಷ್ಟಿ : ನೋಟ |
| | # 5 | ಸ್ಪರ್ಶ, ರುಚಿ, ವಾಸನೆ, ಸಮತೋಲನ ಚಲನೆ |
| ಸ್ಥೂಲ ಚಲನೆ | # 1 | ಕತ್ತು ನಿಲ್ಲುವುದು |
| | # 2 | ತೆವಳುವುದು, ಜಿಗಿಯುವುದು |
| | # 3 | ಕೂರುವುದು |
| | # 4 | ನಿಲ್ಲುವುದು |
| | # 5 | ನಡೆಯುವುದು |
| | # 6 | ಹತ್ತುವುದು |
| | # 7 | ಜೋತಾಡುವುದು |
| | # 8 | ಚೆಂಡಿನ ಚಟುವಟಿಕೆಗಳು |
| | # 9 | ನೆಗೆಯುವುದು |
| | # 10 | ಚಲನಾ ಅನುಕರಣೆ |
| | # 11 | ಚಲನ ಶಕ್ತಿ |
| ಸೂಕ್ಷ್ಮ ಚಲನ | # 1 | ಹಿಡಿತ |
| | # 2 | ಹರಿದು ಹಾಕುವುದು, ಹರಡುವುದು |
| | # 3 | ಆಣಿಕಲ್ಲು ಆಟ ಆಡುವುದು |
| | # 4 | ಮಡಚುವುದು |
| | # 5 | ಚದುರಿದ ವಸ್ತುಗಳ ಜೋಡಣೆ, ಅಂಟಿಸುವುದು, ಕತ್ತರಿಸುವುದು |
| ಸೂಕ್ಷ್ಮ ನಿರ್ವಾಹಕ | # 6 | ಕತ್ತರಿಸಿ ಅಂಟಿಸುವುದು |
| | # 7 | ಬಾಯಿಯ ಚಟುವಟಿಕೆಗಳು |
| ಅವಧಾನ | # 1 | ಈಗ ಮತ್ತು ಆಮೇಲೆ ಎಂಬುದರ ಸಾಮಾನ್ಯ ಜ್ಞಾನ |
| | # 2 | ಅಂಕಿಗಳ/ಪದಗಳ ಚಟುವಟಿಕೆಗಳು |



ಸ್ವಸಹಾಯ ಚಟುವಟಿಕೆಗಳು ೧೪ : ಸ್ಟ್ರಾಪೈಪಿನಿಂದ ನೀರು ಅಥವಾ ಹಣ್ಣಿನ ರಸವನ್ನು ಹೀರಿಕೊಳ್ಳುವುದು



ಸ್ವಸಹಾಯ ಚಟುವಟಿಕೆಗಳು ೨೩ : ಇಲಾಸ್ಟಿಕ್‌ಪಟ್ಟಿ ಇರುವ ಪ್ಯಾಂಟ್ ಮತ್ತು ಚಡ್ಡಿಯನ್ನು ಕಳಚುವುದು, ಹಾಕುವುದು



ಸ್ವಸಹಾಯ ಚಟುವಟಿಕೆಗಳು ೨೮ : ಬಟ್ಟೆಯ ಗುಂಡಿಗಳನ್ನು ಹಾಕುವುದು



ಸ್ವಸಹಾಯ ಚಟುವಟಿಕೆಗಳು ೩೭ : ಟವೆಲಿನಿಂದ ಕೈ ಒರೆಸಿಕೊಳ್ಳುವುದು



ಸ್ವಸಹಾಯ ಚಟುವಟಿಕೆಗಳು ೩೮ : ಸೋಪ್ ಉಪಯೋಗಿಸಿ
ಕೈ ತೊಳೆಯುವುದು



ಅರಿವಿನ ೬ : ಗಡಿಯಾರ ನೋಡಿ ಸಮಯ ಹೇಳುವುದು



ಅರಿವಿನ ೩೪ : ಮೂಲ ಆಕಾರಗಳನ್ನು ಗುರುತಿಸುವುದು



ಶಾಲಾ ಪೂರ್ವ ೧೫ : ಪೆನ್ನು ಪೆನ್ಸಿಲ್‌ಗಳನ್ನು
ಬರೆಯುವುದಕ್ಕಾಗಿ ಹಿಡಿದುಕೊಳ್ಳುವುದು

| | | |
|---|---|---|
| | # 3 | ಅಂಕಿ, ಪದ, ಬಣ್ಣಗಳನ್ನು ಕ್ಯಾನ್ಸಲ್ ಮಾಡುವ ಚಟುವಟಿಕೆಗಳು |
| (ಸಂಭಾಷಣೆ)ಸಂವಾದ ಚಟುವಟಿಕೆಗಳು | # 1 | ತೋರಿಸುವುದು |
| | # 2 | ಸೂಚನಾತ್ಮಕ ಕಟ್ಟು |
| | # 3 | ವ್ಯಾಕರಣದ ರೂಪಗಳು, ಕ್ರಮಗಳು |
| | # 4 | ಪ್ರಶ್ನಾರ್ಥಕ ಚಿಹ್ನೆಗಳು |
| | # 5 | ಭಿನ್ನ ಭಾವ ತೋರಿಸುವಿಕೆಯ ಗ್ರಹಣ ಶಕ್ತಿ |
| | # 6 | ಭಾಷೆಯನ್ನು ವ್ಯಕ್ತಪಡಿಸುವಿಕೆ |
| | # 7 | ಸಾಮಾನ್ಯ / ವೈಯಕ್ತಿಕ ಜ್ಞಾನ |
| ಸಾಮಾಜಿಕ ಅಟ | # 1 | ಸಾಮಾಜಿಕ ನಗುವು |
| | # 2 | ಆಹ್ವಾನಿಸುವ ಕೌಶಲ |
| | # 3 | ನಾನು ಮತ್ತು ಬೇರೆ ಎಂಬುದರ ತಿಳುವಳಿಕೆ |
| | # 4 | ಸ್ವತ: ಸಂಬಂಧಪಟ್ಟ ವಸ್ತುಗಳು ಮತ್ತು ಬೇರೆಯವರಿಗೆ ಸಂಬಂಧಪಟ್ಟ ವಸ್ತುಗಳನ್ನು ಗುರುತಿಸುವುದು. |
| | # 5 | ನಿಧಾನ ವಿಳಂಬಗತ, |
| | # 6 | ಅನುಕರಣೆ |
| | # 7 | ಹಂಚಿಕೊಳ್ಳುವುದು |
| | # 8 | ತನ್ನ ಸರದಿಯನ್ನು ಕಾಪಾಡಿಕೊಳ್ಳುವುದು/ಗುರುತಿಸುವುದು |
| | # 9 | ರಹಸ್ಯಗಳನ್ನು ಕಾಪಾಡಿಕೊಳ್ಳುವುದು |
| | # 10 | ಕರುಣೆ / ಅನುಭೂತಿ, ಶಕ್ತಿ ತೋರಿಸುವುದು. |
| | # 11 | ಒಳ್ಳೆಯ ಮತ್ತು ಸಭ್ಯತೆಯ ನಡತೆಗಳು |
| | # 12 | ಮೂಲಭೂತ ಸುರಕ್ಷತೆಗಳು ಮತ್ತು ಪ್ರಥಮ ಚಿಕಿತ್ಸೆಯ ಕೌಶಲಗಳು |
| | # 13 | ಬಿಡುವು |
| | # 14 | ಹಾಸ್ಯ ಸ್ವಭಾವ |
| ಸ್ವಯಂ ಸಹಾಯ | # 1 | ತಿನ್ನುವುದು |
| | # 2 | ಉಡುಪು ಧರಿಸುವುದು |
| | # 3 | ದೌರ್ಬಲ್ಯ, ಭೀತಿ ಮತ್ತು ಸ್ವಚ್ಛಗೊಳಿಸಿಕೊಳ್ಳುವುದು |
| ಜ್ಞಾನಾತ್ಮಕ ಚಟುವಟಿಕೆಗಳು | # 1 | ಗಡಿಯಾರ ಮತ್ತು ಸಮಯದ ಕೌಶಲಗಳು |
| | # 2 | ಕ್ಯಾಲೆಂಡರ್ |

| | | |
|---|---|---|
| | # 3 | ಹಣ |
| | # 4 | ಹೋಲಿಸುವ ಕುಶಲತೆ |
| ಮಾನಸಿಕ ಚಟುವಟಿಕೆ | # 5 | ಬೇಡಿಕೆ ಗ್ರಹಿಸುವ ಕುಶಲತೆ |
| | # 6 | ಪ್ರತ್ಯೆಯ ಕುಶಲತೆಗಳು |
| | # 7 | ಗುರುತಿಸುವ ಕುಶಲತೆಗಳು |
| | # 8 | ಸರಣಿಯ ಕ್ರಮಬದ್ಧವಾಗಿ ಇಡುವ ಕುಶಲತೆಗಳು |
| | # 9 | ಪ್ರತಿ ಉಪಾಯ ರೂಪಿಸುವ ಸಾಮರ್ಥ್ಯ |
| | # 10 | ತಿರುಗಿಸಿ ಇಡುವುದು |
| | # 11 | ಸಾಮಾನ್ಯವಾಗಿರುವ ಕೌಶಲಗಳು |
| | # 12 | ಅಳತೆಯ ಅರಿವು |
| | # 13 | ಆಕಾರದ ಬಗ್ಗೆ ಅರಿವು |
| | # 14 | ಬಣ್ಣದ ಅರಿವು |
| | # 15 | ತೂಕದ ಅರಿವು |
| | # 16 | ದೇಹದ ಬಗ್ಗೆ ಅರಿವು |
| | # 17 | ಎಡ ಬಲ ಗುರುತಿಸುವ ಶಕ್ತಿ |
| | # 18 | ಸ್ಥಾನದ ಅರಿವು |
| | # 19 | ದಿಕ್ಕಿನ ಅರಿವು |
| ಪೂರ್ವ ಶಿಕ್ಷಣ | # 1 | ಅಧ್ಯಯನ – ಪೂರ್ವ ಒಟ್ಟು ಕೌಶಲಗಳು ಚಿತ್ರವನ್ನು ಓದುವುದು |
| | # 2 | ಪೂರ್ವ ಬರವಣಿಗೆ ಕೌಶಲ್ಯ, ಗೀಚುವುದು, ಕಾಪಿ ಮಾಡುವುದು ಇತ್ಯಾದಿ., |
| | # 3 | ಗಣಿತ ಪೂರ್ವ ಕೌಶಲ್ಯಗಳು, ಬಾಯಿಪಾಠ ಹೇಳುವುದು. |

ಶಾಲಾ ಪೂರ್ವ ಶೈಕ್ಷಣಿಕ ವಯಸ್ಸಿನ ಮಕ್ಕಳಿಗೆ ಆದಷ್ಟೂ ಬೇಗನೇ ಮೇಲೆ ಕೊಟ್ಟಿರುವ ವಸ್ತುಗಳನ್ನು, ವಿಷಯಗಳನ್ನು ಅವರು ಮಾಮೂಲಿ ಶಾಲೆಗೆ ಹೋಗುವುದಕ್ಕಿಂತ ಮೊದಲು ಕಲಿಸುವುದು/ತಿಳಿದಿರುವುದು ಬಹಳ ಮುಖ್ಯ.

# ಬೆಳವಣಿಗೆ ನ್ಯೂನತೆಯಿರುವ ಮಕ್ಕಳ ಮನೆಯ ಶಿಕ್ಷಣಕ್ಕೆ ಪರಿಣಾಮಕಾರಿಯಾದ ಕೆಲವು ಉಪಯುಕ್ತ ಮಾರ್ಗದರ್ಶಕಗಳು

ಮಗುವು ಶಾಲಾಕಲಿಕೆಯನ್ನು ಪ್ರಾರಂಭಿಸುವ ಮೊದಲು, ಮೇಲೆ ಹೇಳಿರುವ ಚಟುವಟಿಕೆಗಳಲ್ಲಿ ಆ ಮಗುವಿಗೆ ಸಾಕಷ್ಟು ಪರಿಣತಿಗಳಿಸಲು ಅವಕಾಶ ಕೊಡಿ. ಈ ರೀತಿ ಪರಿಣತಿ ಇಲ್ಲದ ಮಗುವೊಂದು ನಂತರದ ಶಾಲಾಕಲಿಕೆಯಲ್ಲಿ ಕಷ್ಟವನ್ನೆದುರಿಸುವ ಸಂಭವವಿರುತ್ತದೆ. ಕೆಲವು ಮಕ್ಕಳು ಈ ಚಟುವಟಿಕೆಗಳನ್ನು ತಮಗೆ ತಾವೇ ಪ್ರಾಸಂಗಿಕವಾಗಿ ಕಲಿಯಬಹುದು. ಆದರೆ ಈ ಮಕ್ಕಳಲ್ಲಿ ಹೆಚ್ಚಿನವರಿಗೆ ಈ ಚಟುವಟಿಕೆಗಳಲ್ಲಿ ಅಭ್ಯಾಸ ಇರುವುದಿಲ್ಲ. ಕೆಳಮಟ್ಟದ ಈ ತರಬೇತಿಯು ಸರಿಯಾಗಿ ಆಗದಿರುವ ಮಕ್ಕಳಿಗೆ ನಂತರ ಹೆಚ್ಚು ಕಠಿಣ ವಿಚಾರಗಳನ್ನು ಹೇಳಿಕೊಡಲು ಉಪಾಧ್ಯಾಯರುಗಳು ಕಷ್ಟಪಡಬೇಕಾಗುತ್ತದೆ. ಆತ್ಮೀಯ ತಂದೆ ತಾಯಿಯರೇ, ಅಧ್ಯಯನವನ್ನು ಮುಗಿಸುವ ಮುನ್ನ, ನಿಮ್ಮ ಮಗುವಿಗೆ ನಯನಾಜೂಕಾಗಿ ಬೋಧಿಸುವುದು ಹೇಗೆಂಬುದರ ಬಗೆಗೆ ಇಲ್ಲಿ ಕೆಲವು ಸಂಕ್ಷಿಪ್ತ ಮಾರ್ಗದರ್ಶನಗಳಿವೆ. ಪರಾವಲಂಬನೆಯಿಂದ ಸ್ವಾವಲಂಬನದ ಕಡೆಗೆ ನಿಮ್ಮ ಮಗುವನ್ನು ಮುನ್ನಡೆಸಿರಿ.

## ಅ) ಸರಳತೆಯಿಂದ ಕ್ಲಿಷ್ಟತೆಯಡೆಗೆ

ಯಾವಾಗಲೂ ಸರಳವಾದ ಕೆಲಸಗಳಿಂದ ಕ್ಲಿಷ್ಟವಾದ ಕೆಲಸಗಳನ್ನು ಯೋಜಿಸುವುದು, ವಿಂಗಡಿಸುವುದು, ಗುರುತಿಸುವುದು, ಹೆಸರಿಸುವುದು ಇತ್ಯಾದಿ ಕ್ರಮವನ್ನನುಸರಿಸಬೇಕು. ನೀವು ಒಂದು ಹಂತ ಮೇಲಕ್ಕೆ ನೆಗೆದರೆ, ಒಂದು ಹಂತ ತಪ್ಪಿಸಿಕೊಂಡಂತೆ. ಹೀಗಾದಾಗ ನಿಮ್ಮ ಮಗುವು ಗಲಿಬಿಲಿಗೊಂಡು ಕಲಿಕೆಯಲ್ಲಿ ತಪ್ಪುವ ಸಂಭವವಿದೆ.

## ಆ) ತಿಳಿದಿರುವ ವಿಷಯದಿಂದ ತಿಳಿಯದುದರೆಡೆಗೆ

ನಿಮ್ಮ ಮಗುವಿಗೆ ತಿಳಿದಿರುವ ಚಟುವಟಿಕೆಯಿಂದ ತಿಳಿಯದುದ್ದನ್ನು ಹೇಳಿಕೊಡಲು ಪ್ರಾರಂಭಿಸಿರಿ. ಉದಾಹರಣೆಗೆ, ಎಸೆಯುವುದು, ಹಿಡಿಯುವುದು, ಚೆಂಡೊಂದನ್ನು ಒದೆಯುವುದು, ಇತ್ಯಾದಿಗಳನ್ನು ನಿಮ್ಮ ಮಗುವಿಗೆ ಹೇಳಿಕೊಡಿ. ನಿಮ್ಮ ಮಗುವಿಗೆ ಚೆಂಡು ಎಸೆಯುವುದು ಚೆನ್ನಾಗಿ ಗೊತ್ತಿದ್ದರೆ ಅದರಿಂದಲೇ ಪ್ರಾರಂಭಿಸಿ. ಈ ಹಂತವನ್ನು ಮೊದಲು ಹೇಳಿಕೊಟ್ಟು ನಂತರ ಮುಂದಿನ ಹಂತಕ್ಕೆ ಹೋಗಿ.

## ಇ) ಒತ್ತಡ ಹೇರಿ ಕಲಿಸುವುದನ್ನು ಮಾಡಬೇಡಿ

ನಿಮ್ಮ ಮಗುವಿನ ಸಾಮರ್ಥ್ಯಕ್ಕಿಂತಲೂ ಹೆಚ್ಚು ಕಲಿಸಲು ಒತ್ತಾಯಪಡಿಸಬೇಡಿ. ಅಂದರೆ, ಮಕ್ಕಳ ಸಾಮರ್ಥ್ಯಗಳಲ್ಲಿ ಒಂದು ಮಗುವಿನಿಂದ ಇನ್ನೊಂದು ಮಗುವಿಗೆ ವ್ಯತ್ಯಾಸವಿರುತ್ತದೆ. ಮಕ್ಕಳ ಕಲಿಕೆಯ ಸಾಮರ್ಥ್ಯವನ್ನು ಇಂತಿಷ್ಟೇ ಎಂದು ನಿಗದಿಪಡಿಸಲಾಗುವುದಿಲ್ಲ. ಆದ್ದರಿಂದ ಮಕ್ಕಳ ಸಾಮರ್ಥ್ಯವನ್ನು ಅರಿತು ಅದಕ್ಕೆ ಅನುಗುಣವಾಗಿ ಕಲಿಕೆಯಲ್ಲಿ ತೊಡಗಿಸಬೇಕು. ಮಗುವಿನ ಕಲಿಕೆಯ ಮಿತಿಗಿಂತಲೂ ಅತಿಯಾಗಿ ಕಲಿಸಿದಾಗ ಮುಗುವು ಮಾನಸಿಕವಾಗಿ ಒತ್ತಡಕ್ಕೊಳಗಾಗುತ್ತದೆ. ವಯಸ್ಸಿಗನುಗುಣವಾಗಿ ಕಲಿಕೆಯನ್ನು ಹೊಂದಿರುವ ಇತರ ಮಕ್ಕಳೊಂದಿಗೆ ನಿಮ್ಮ ಮಗುವನ್ನು ಹೋಲಿಸಬೇಡಿ.

ನಿಮ್ಮ ಮಗುವಿನ ಕಲಿಕೆಯ ಸಾಮರ್ಥ್ಯವು ಕಡಿಮೆ ಇದ್ದು, ನೀವು ಆ ಮಗುವಿನಿಂದ ಹೆಚ್ಚು ಕಲಿಕೆಯನ್ನು ನಿರೀಕ್ಷಿಸಿದಾಗ ಇಂತಹ ಸನ್ನಿವೇಶಗಳನ್ನು ನೀವು ಕಾಣುತ್ತೀರಿ. ಅವುಗಳೆಂದರೆ: ವಯಸ್ಸಿಗನುಗುಣವಾದ ಕಲಿಕಾಸಾಮರ್ಥ್ಯವನ್ನು ಹೊಂದಿರುವ ಮಕ್ಕಳೊಂದಿಗೆ ನಿಮ್ಮ ಮಗುವನ್ನು ಹೋಲಿಸುವುದೊಂದಾದರೆ. ನಿಮ್ಮ ಮಗುವಿನಲ್ಲಿ ಯಾವಾಗಲೂ ತಪ್ಪು ಕಂಡುಹಿಡಿಯುವುದು ಮತ್ತು ನಿಮ್ಮ ಮಗುವು ಕಲಿಕೆಯಲ್ಲಿ ಹಿಂದುಳಿದಿರುವುದರ ಬಗೆಗೆ ನಿಮ್ಮ ಕೋಪ ಮತ್ತು ದು:ಖವನ್ನು ಮಗುವಿನ ಮೇಲೆ ಯಾವುದಾದರೊಂದು ರೀತಿಯಲ್ಲಿ ವ್ಯಕ್ತಪಡಿಸುವುದು.

ಬೆಳವಣಿಗೆ ಮಧ್ಯಮವಾಗಿ ನ್ಯೂನತೆಗೊಂಡಿರುವ ಮೂರು ವರುಷದ ಮಗುವಿನ ತಾಯಿಯಾದ ಮಂಜುಳ ಗೃಹತರಬೇತಿ ಕಾರ್ಯಕ್ರಮದಂತೆ ಮಗುವಿಗೆ ಕಾರ್ಯಚಟುವಟಿಕೆಗಳ ಕೆಲಸದ ಪಟ್ಟಿಯೊಂದನ್ನು ಸಿದ್ಧಪಡಿಸಿದ್ದಳು. ಮಂಜುಳಾಳು ಎ.ಸಿ.ಪಿ.ಸಿ.– ಡಿ.ಡಿಯಲ್ಲಿ ಬರುವಂತಹ ೨೪ ತಿಂಗಳಿನ ಮಕ್ಕಳಿಗೆ ನಿಗದಿಪಡಿಸಿದ ಚಟುವಟಿಕೆಗಳಲ್ಲಿ, ತಾನು ನಿರ್ವಹಿಸಲಾಗದ ೨೦

ಚಟುವಟಿಕೆಗಳನ್ನು ಆಯ್ಕೆ ಮಾಡಿಕೊಂಡಳು. ಆದರಂತೆ ಮಂಜುಳ ಈ ೨೦ ಚಟುವಟಿಕೆಗಳನ್ನು ಮೂರ ವಾರಗಳಲ್ಲಿ ಮಗುವಿಗೆ ಕಲಿಸುವ ಗುರಿ ಹೊಂದಿದ್ದಳು. ಇದರಲ್ಲಿ ಆ ತಾಯಿಯ ಉದ್ದೇಶವು ಒಳ್ಳೆಯದೇ ಆಗಿದ್ದರೂ ಆಕೆಯು ಒಂದು ಮುಖ್ಯ ಅಂಶವನ್ನು ಕೈಬಿಟ್ಟಿದ್ದಳು. ಅಂದರೆ, ಈ ಮೂರು ವಾರದ ಗೃಹತರಬೇತಿ ಕಾರ್ಯಕ್ರಮದಲ್ಲಿ ಮಂಜುಳ ಮೂರು ಅಥವಾ ನಾಲ್ಕು ಗುರಿಗಳನ್ನು ಇಟ್ಟುಕೊಂಡು ಕ್ರಮಬದ್ಧವಾಗಿ ಕಲಿಸಿದ್ದರೆ ಆ ಮಗುವು ಉತ್ತಮವಾಗಿ ಕಲಿಯುತಿತ್ತು. ಬದಲಾಗಿ ಇಲ್ಲಿ ಮಗುವಿನ ಸಾಮರ್ಥ್ಯಕ್ಕೆ ಮೀರಿ ತಾಯಿಯು ಮಗುವಿಗೆ ಕಲಿಸಲು ಪ್ರಯತ್ನಿಸಿದ್ದರಿಂದ ಆಕೆಯು ಮಗುವಿಗೆ ಕಲಿಸುವುದರಲ್ಲಿ ವಿಫಲಳಾದಳು ಇದರಿಂದ ತಿಳಿದುಬರುವುದೇನೆಂದರೆ ಮಗುವಿನ ಕಲಿಕೆಯ ಸಾಮರ್ಥ್ಯವನ್ನು ಮೀರಿ ಒತ್ತಾಯಪಡಿಸಿ ಕಲಿಸುವುದಕ್ಕಿಂತ ಹಂತ ಹಂತವಾಗಿ ಕಲಿಸುವುದು ಬಲು ಉತ್ತಮ.

## ಈ) ಅಸಹಾಯಕತೆಯ ಭಾವನೆಯಿಂದ ಹೊರಬನ್ನಿ

ಒತ್ತಡದ ಕಲಿಕೆಯು ಮಗುವಿನ ಮೇಲೆ ಕೆಟ್ಟ ಪರಿಣಾಮವನ್ನು ಬೀರಿದರೆ, ತಂದೆ ತಾಯಿಯರಲ್ಲಿರಬಹುದಾದ ಅಸಹಾಯಕತೆಯ ಮನೋಭಾವವು ಅಷ್ಟೇ ಅಪಾಯಕರ. ನ್ಯೂನತೆಯುಳ್ಳ ಮಕ್ಕಳಿಗೆ ಬೋಧಿಸುತ್ತಿರುವಾಗ ಪದೇಪದೇ ಸಂಭವಿಸುವ ಸೋಲುಗಳು, ಎದುರಾಗುವ ಅಡ್ಡಿಗಳು ಇದಕ್ಕೆ ಕಾರಣ. ಆದರಿಂದ ಹತಾಶ ಭಾವನೆ. ಈ ವಿಶಾಲ ಪ್ರಪಂಚದಲ್ಲಿ ತಾನೂ ಒಂಟಿ ಎಂಬಂತಹ ಭಾವನೆ ನಕಾರಾತ್ಮಕ ಆಲೋಚನೆ, ಭರವಸೆಯಿಲ್ಲದಿರುವ ಸ್ಥಿತಿ, ಯಾವುದೂ ಸರಿಯಿಲ್ಲವೆಂಬ ಕೊರಗು ಹಾಗೂ ನಾನೇನೂ ಮಾಡಲಾರೆ ಎಂಬ ರೀತಿಯ ಅನುಭವಗಳ ಕಡೆಗೆ ಒಯ್ಯುವುದು. ನಿಜವಾಗಿ ನೋಡಿದರೆ, ಈ ರೀತಿಯ ಮಕ್ಕಳಿಗೆ ಬೋಧಿಸುವ ರಸ್ತೆಯು ಸಾಮಾನ್ಯ ಮಕ್ಕಳಿಗೆ ಕಲಿಸುವ ರಸ್ತೆಯ ಹಾಗೆ ನಯವಾಗಿಲ್ಲ. ಗೃಹ ತರಬೇತಿ ಕಾರ್ಯಕ್ರಮದಲ್ಲಿ ನಿಮ್ಮ ಮಗುವು ಏನು ಸಾಧಿಸಿತು ಅಥವಾ ಎಷ್ಟು ಸಾಧಿಸಲಿದೆ ಎಂಬುದು ನಿಮ್ಮ ಮನೋಭಾವಕ್ಕೆ ಸಂಬಂಧಿಸಿದೆ.

ಶ್ರೀಮತಿ ಕಲ್ಪನಾ ಆರು ವರ್ಷದ ಚಂದ್ರಿಕಾ ಎಂಬ ಮಗುವಿನ ತಾಯಿ. ಈ ಮಗುವಿಗೆ ತೀವ್ರ ಬುದ್ಧಿಮಾಂಧ್ಯತೆ ಹಾಗೂ ಸೆರೆಬ್ರಲ್ ಪಾಲ್ಸಿ ಇದೆ ಅಂತ ಪರೀಕ್ಷಿಸಿದಾಗ ತಿಳಿದುಬಂತು. ಹೀಗಾಗಿ ಮಗುವಿನ ತಂದೆತಾಯಿಯರು ಹಲವಾರು ತಜ್ಞರ ಸಲಹೆ ಪಡೆದರು. ಆಕೆಯ ಪತಿ ಹಾಗೂ ಕುಟುಂಬದ ಅತ್ಯಲ್ಪ ಸಹಕಾರದೊಡನೆ ಮಗುವಿಗೆ ತರಬೇತಿ ನೀಡಲು ಈಕೆ ಪ್ರಯತ್ನಿಸಿದಾಗ್ಯೂ ಚಂದ್ರಿಕಾಳಲ್ಲಿ ಹೆಚ್ಚಿನ ಅಭಿವೃದ್ಧಿ ಏನೂ ಕಂಡುಬರಲಿಲ್ಲ. ಶ್ರೀಮತಿ ಕಲ್ಪನಾ ಒಂದೊಮ್ಮೆ ನಿರಾಶೆಗೊಂಡಳು. ಆಕೆಯ ಮನಸ್ಸಿನಲ್ಲಿ ಮಗುವಿಗೆ ಯಾವುದೇ ವಿಧವಾದ ತರಬೇತಿ ಕೊಡುವುದು ಬೇಡ ಎಂಬ ಆಲೋಚನೆಗಳು ಬಂದವು. ಈ ಮಗುವಿಗಾಗಿ ನಾನೊಬ್ಬಳೇ ಏತಕ್ಕೆ ಇಷ್ಟೊಂದು ಸಮಯ ಹಾಗೂ ಶಕ್ತಿಯನ್ನು ವ್ಯಯ ಮಾಡಲಿ ? ಈ ಎಲ್ಲ ತೊಂದರೆಗಳಿಂದ ನಾನು ಏನನ್ನು ಪಡೆದೆ ? ಇವೆಲ್ಲವನ್ನೂ ಮಾಡಿದಲ್ಲಿ ನನ್ನ ಮಗುವು ಸುಧಾರಿಸಬಲ್ಲುದೇ? ಈ ರೀತಿಯ ಅನುಮಾನಗಳು ಹಾಗೂ ಪ್ರಶ್ನೆಗಳು ಆಕೆಯ ಮನಸ್ಸನ್ನು ಕಾಡತೊಡಗಿದವು. ಶ್ರೀಮತಿ ಕಲ್ಪನಾ ಬಹಳ ದೃಢಮನಸ್ಸಿನ ಹೆಂಗಸು. ಈ ರೀತಿಯ ನಕಾರಾತ್ಮಕ ಆಲೋಚನೆಗಳು ಮನಸ್ಸಿಗೆ ಬಂದರೂ ಆಕೆ ಅದನ್ನು ಬೆಳೆಯಲು ಬಿಡಲಿಲ್ಲ. ಆಕೆ ಸಣ್ಣಪುಟ್ಟ ಗುರಿಗಳನ್ನಿಟ್ಟುಕೊಂಡು ದೃಡವಾಗಿ ಕೆಲಸಮಾಡಿದಳು ಹಾಗೂ ಪ್ರತಿಯೊಂದನ್ನೂ ಕಾಲಕ್ರಮೇಣ ಸಾಧಿಸಿದಳು.

## ಉ) ಕಲಿಕೆಯ ಸ್ವರೂಪದ ಗತಿ

ಕೌಶಲದ ವರ್ತನೆಗಳನ್ನು ಕಲಿಯುವುದರಲ್ಲಿ ಹಲವು ಹಂತಗಳಿವೆ. ಈ ಹಂತಗಳಲ್ಲ ಎಲ್ಲೋ ಒಂದು ಕಡೆ ನಿಮ್ಮ ಮಗುವೂ ಇದೆ. ಈ ಹಂತವನ್ನು ಅಥವಾ ಮಟ್ಟವನ್ನು ನೀವು ಸರಿಯಾಗಿ ಗುರುತಿಸದಿದ್ದಲ್ಲಿ ಅಪೇಕ್ಷಿತ ಅಂಶಗಳನ್ನು ಸಾಧಿಸುವುದಕ್ಕಾಗುತ್ತದೆ ಎಂಬುದು ಅನುಮಾನ. ಒಂದು ನಿರ್ದಿಷ್ಟ ವರ್ತನಾಗುರಿಯನ್ನು ಹೇಳಿಕೊಡುವಾಗಿನ ನಿಮ್ಮ ಸೋಲನ್ನು ನೀವು ಇದು ಮಗುವಿನ ಲೋಪ ಅಥವಾ ಅದು ಮಾಡುವ ತಪ್ಪು ಅಂತ ತಪ್ಪಾಗಿ ಅರ್ಥಮಾಡಬೇಡಿ. ಬದಲಿಗೆ, ಇದು ನಿಮ್ಮ ತಪ್ಪುಲೆಕ್ಕಾಚಾರದ ಭೋಧನಾಕ್ರಮವಿರಬೇಕೆಂದು ತಿಳಿಯಿರಿ. ಆದ್ದರಿಂದ ನಿಮ್ಮ ಮಗುವಿನ ಕಲಿಕೆಯ ವೇಗಕ್ಕೆ ನಿಮ್ಮ ಭೊಧನಾಕ್ರಮವನ್ನು ಹೊಂದಿಸಿಕೊಳ್ಳಿ. ನಿಮ್ಮದೇ ಆದ ವೇಗಕ್ಕೆ ಅಥವಾ ಅಪ್ರಸ್ತುತ ವ್ಯಾಸಂಗಕ್ರಮಕ್ಕೆ ಮಗುವನ್ನು ತಳ್ಳಬೇಡಿರಿ.

ಶ್ರೀಮತಿ ಲಕ್ಷ್ಮೀದೇವಿಯು ತಮ್ಮ ಐದುವರ್ಷ ವಯಸ್ಸಿನ ಮಗುವಿಗೆ ಆಕಾರದ ಜ್ಞಾನವನ್ನು ಕಲಿಸಲು ಯೋಜಿಸುತ್ತಿದ್ದಳು. ಆಕೆ ನೇರವಾಗಿ ವೃತ್ತ, ಚೌಕ, ತ್ರಿಕೋನ, ವಜ್ರಾಕೃತಿ, ಆಯತಾಕಾರ, ನಕ್ಷತ್ರಾಕಾರ, ಇತ್ಯಾದಿ ವಿವಿಧ ಆಕೃತಿಗಳನ್ನು ಮಗುವಿಗೆ ತೋರಿಸಿ ಅವುಗಳ ಹೆಸರುಗಳನ್ನು ಮಗುವಿನೆದುರು ಗಟ್ಟಿಯಾಗಿ ಹೇಳತೊಡಗಿದಳು. ಇದು ವಜ್ರಾಕೃತಿ, ಇದು ಆಯತಾಕಾರ ಇತ್ಯಾದಿಯಾಗಿ ಮೊದಲಿಗೆ ಆಯಾ ಆಕಾರಗಳನ್ನು

ಸರಿಯಾಗಿ ಗುರುತಿಸುತ್ತಿದ್ದುದು ಕಂಡುಬಂದಿತು. ಆದರೆ, ಮರುದಿನ ಇದೇ ಪಾಠವನ್ನು ಪುನರಾವರ್ತನೆ ಮಾಡಿದಾಗ ಮಗುವು ಗಲಿಬಿಲಿಗೊಂಡು ವಜ್ರಾಕೃತಿಗೂ, ಆಯತಾಕಾರ ಅಥವಾ ಚೌಕಕ್ಕೂ ನಡುವೆ ಅಂತರವನ್ನು ಗುರುತಿಸಲಾರದೆ ಹೋಯಿತು. ಹೀಗಾಗಿ ಶ್ರೀಮತಿ ಲಕ್ಷ್ಮೀದೇವಿಯು ತನ್ನ ಮಗುವಿಗೆ ಆಕಾರಗಳನ್ನು ಭೋಧಿಸುವ ಪ್ರಯತ್ನದಲ್ಲಿ ಯಾವುದೇ ಪ್ರಗತಿ ಕಾಣದೆ ನಿರಾಶಳಾಗಬೇಕಾಯಿತು.

## ಊ) ಆಶಯದ ತಪ್ಪಾದ ಸಂವಹನವನ್ನು ಗುರುತಿಸುವುದು

ತರಬೇತಿ ಕಾರ್ಯಕ್ರಮದ ಯಶಸ್ಸಿನಲ್ಲಿ ಪ್ರೇಕ್ಷಕರ ಹಾಗೂ ಮಗುವಿನ ನಡುವಿನ ಮುಚ್ಚುಮರೆಯಿಲ್ಲದ ಸಂಬಂಧವು ಒಂದು ಸಂದಿಗ್ಧ ಆಯಾಮವಾಗಿದೆ. ಗೃಹತರಬೇತಿಯ ಸಂದರ್ಭದಲ್ಲಿ ಪೋಷಕರ ಹಾಗೂ ಮಗುವಿನ ನಡುವೆ ಉಂಟಾಗುವ ತಪ್ಪು ಸಂವಹನವು ಅನುಸರಿಸದಿರುವಿಕೆಯಂತಹ ತೀವ್ರ ರೀತಿಯ ಸಮಸ್ಯೆಗೆ ಕಾರಣವಾಗಬಹುದು. ಕುಟುಂಬದ ಕೆಲವು ಸಂಬಂಧಿಕರ ವಶದಲ್ಲಿ ಮಗುವನ್ನು ಪದೇಪದೇ ಬಿಡುವುದರಿಂದ ಅದು ಅವರ ಮಾದರಿಯನ್ನೇ ಅನುಕರಿಸುತ್ತದೆ. ಕೆಲವು ವೇಳೆ ಬೇಕಾದ ಸಂವಹನ ಮತ್ತು ಅದರ ನಿಜವಾದ ಅರ್ಥದ ನಡುವೆ ಮಗುವು ಭೇದವನ್ನೆಣಿಸುತ್ತದೆ. ಉದಾಹರಣೆಗೆ, ಉತ್ತಮ ಗುಣ ನಡತೆಯ ಮಗುವೊಂದನ್ನು ನೀವು ನಿಮ್ಮ ಮಗುವಿಗೆ ಮಾದರಿಯಾಗಿ ತೋರಿಸಬಹುದು ಆದರೆ, ವಾಸ್ತವವಾಗಿ ನಿಮ್ಮ ಹೋಲಿಕೆಯ ಮಾತುಗಳು ಮಗುವಿಗೆ ತೀವ್ರ ಅಸಮಾಧಾನವನ್ನುಂಟುಮಾಡಬಹುದು.

ರಾಧಾಳ ತಾಯಿಯು ರಾಧಾಳಿಗೆ "ಯಾಕೆ ನೀನು ಅರುಣನ ರೀತಿ ವರ್ತಿಸುವುದಿಲ್ಲ ನೋಡು ಅವನು ಎಷ್ಟು ಶುಭ್ರವಾಗಿದ್ದಾನೆ" ಎಂದು ಬೈದಳು. ಆದರೆ ತಾಯಿಯು ನಿಜವಾಗಿಯೂ ಅರುಣನನ್ನು ಮಾದರಿಯಾಗಿ ರಾಧಾಳಿಗೆ ತೋರಿಸುತ್ತಿದ್ದಾಳೆ. ಆದರೆ ರಾಧಾ ತಕ್ಷಣ "ಅಮ್ಮ! ನನಗೆ ಗೊತ್ತು ನೀನು ಯಾವಾಗಲೂ ಅರುಣನನ್ನೇ ಪ್ರೀತಿಸುವುದು. ಆದ್ದರಿಂದಲೇ ನೀನು ಯಾವಾಗಲೂ ಅವನನ್ನು ಹೊಗಳುತ್ತಿರುತ್ತೀಯಾ ಮತ್ತು ನನ್ನನ್ನು ದ್ವೇಷಿಸುತ್ತೀಯಾ"

## ಋ) ಸ್ವಯಂ ಸಾಮರ್ಥ್ಯ

ಕೆಲವೊಮ್ಮೆ ಪೋಷಕರು ತಮಗೆ ತಿಳಿಯದಹಾಗೆ ಕೆಲವೊಂದು ಸಾಂದರ್ಭಿಕ ಮಾತುಗಳನ್ನು ಮಕ್ಕಳ ಬಗ್ಗೆ ಆಡಬಹುದು, ಇಂತಹ ಮಾತುಗಳು ಮಕ್ಕಳ ಕಲಿಕೆಗೆ ಅಡ್ಡಿಯನ್ನು ಉಂಟು ಮಾಡುತ್ತದೆ. ಇಂತಹ ಮಾತುಗಳೆಂದರೆ "ಅಯ್ಯೋ ನನ್ನ ಮಗು ಯಾರ ಜೊತೆಗೂ ಬೆರೆಯುವುದೇ ಇಲ್ಲ. ಅಯ್ಯೋ ಅವನು ಬೀನ್ಸ್ ಪಲ್ಯ ಎಂದರೆ ತಿನ್ನುವುದೇ ಇಲ್ಲ" ಇಂತಹ ಕೆಲವೊಂದು ಮಾತುಗಳನ್ನು ಪೋಷಕರು ಬೇರೆಯವರೊಡನೆ ಮಾತನಾಡುವಾಗ ಮಗುವು ಕೇಳಿಸಿಕೊಂಡರೆ. ತನ್ನದೇ ವರ್ತನೆಗಳನ್ನು ದೃಢನಾಗಿ ಬೆಳೆಸಿಕೊಳ್ಳಬಹುದು. ಅಂದರೆ, ಆ ನಿರ್ದಿಷ್ಟವಾದ ಆಹಾರದ ಬಗ್ಗೆ ನಿರಾಕರಣೆಯನ್ನು ಇನ್ನೂ ಹೆಚ್ಚಾಗಿ ಬೆಳೆಸಿಕೊಳ್ಳಬಹುದು. ಜನರ ಜೊತೆ ಬೆರೆಯುವ ವಿಷಯದಲ್ಲಿ ಇನ್ನೂ ಯಾರ ಜೊತೆಯೂ ಬೆರೆಯಲಾಗದ ಒಂದು ವರ್ತನೆಯನ್ನು ದೃಢವಾಗಿ ಬೆಳೆಸಿಕೊಳ್ಳಬಹುದು. ಈ ರೀತಿಯ ಸಾಂದರ್ಭಿಕ ಮಾತುಗಳ ಬಗ್ಗೆ ಪೋಷಕರು ಬಹಳ ಕಾಳಜಿಯಿಂದ ಇರಬೇಕು.

ಇದೇ ರೀತಿಯ ಸಾಂದರ್ಭಿಕ ಮಾತುಗಳ ಸನ್ನಿವೇಶಕ್ಕೆ ಇನ್ನೊಂದು ಸೂಕ್ತ ಉದಾರಣೆ ಎಂದರೆ ಒಬ್ಬಳು ತಾಯಿ ಮಗುವಿನ ಆಹಾರ ಸೇವನೆಯ ಬಗ್ಗೆ, ಇಷ್ಟವಿಲ್ಲದ ಊಟದ ಬಗ್ಗೆ ಇತರರ ಬಳಿ–ಮಗುವಿನ ಮುಂದೆ– ಮಾತನಾಡುವುದರಿಂದ, ಮಗುವು ಆ ನಿರ್ದಿಷ್ಟ ಆಹಾರವನ್ನು ತಿನ್ನದೇ ಇರುವ ವರ್ತನೆಯನ್ನು ಇನ್ನಷ್ಟು ಹೆಚ್ಚು ಬಲಪಡಿಸಿಕೊಳ್ಳಬಹುದು. ಅದೇ ರೀತಿ ಮಗುವಿನ ಮುಂದೆ "ನಮ್ಮ ಮಗುವು ಯಾರ ಜೊತೆಯೂ ಬೆರೆಯುವುದೇ ಇಲ್ಲ" ಎಂದು ತಾಯಿಯು ಆಗಾಗ್ಗೆ ಎಲ್ಲರ ಮುಂದೆ ಹೇಳುತ್ತಲೇ ಇದ್ದರೆ, ಮಗುವು ಅದೇ ರೀತಿ ಹಿಂದುಳಿಯುವ ವರ್ತನೆಯನ್ನು ಕಲಿತುಕೊಳ್ಳುತ್ತದೆ. ಸಾಂದರ್ಭಿಕವಾಗಿ ಮಗುವು ಉದ್ದೇಶಿತ ಕಲಿಕೆಗಿಂತ ಹೆಚ್ಚು ಜಾಸ್ತಿ ಕಲಿಯುತ್ತದೆ.

ಅಂಕಿತಾಳಿಗೆ ಅವಳ ಹೆಸರನ್ನು ಓದುವುದಕ್ಕೆ ಮತ್ತು ಬರೆಯುವುದಕ್ಕೆ ಕಲಿಸಿಕೊಡಲಾಗಿತ್ತು. ಅವಳ ತಾಯಿಯು ಮಗುವಿಗೆ ಬರೆಯುವ ಚಟುವಟಿಕೆಯಲ್ಲಿ ಆಸಕ್ತಿ ಇಲ್ಲ ಎಂಬ ಭಾವನೆಯನ್ನು ಹೊಂದಿದ್ದಳು. ತಾಯಿಯು ಎಲ್ಲರ ಮುಂದೆಯು ಮಗುವಿಗೆ, "ಇವಳು ಏನನ್ನೂ ಬರೆಯುವುದಿಲ್ಲ ಎಂದು ಹೇಳುತ್ತಿದ್ದಳು. ನನ್ನ ಮಗಳು ಬರೆಯುವುದನ್ನು ದ್ವೇಷಿಸುತ್ತಾಳೆ. ನೀವು ಏನಾದರೂ ಅವಳಿಗೆ ಬರೆಯಲು ಓದಲು ಹೇಳದಿದ್ದರೆ ಅವಳೇ ಈ ಪ್ರಪಂಚದಲ್ಲಿ

ಬಹಳ ಒಳ್ಳೆಯ ಹುಡುಗಿ''. ಈ ರೀತಿ ತಾಯಿಯು ಮಗಳ ಬಗ್ಗೆ ಆರೋಪಿಸುತಿದ್ದಳು. ಅವಳಿಗೆ ಏನನ್ನಾದರೂ ಓದಲು ಬರೆಯಲು ಕೊಟ್ಟು ನೋಡಿ ಆಗ ಅವಳ ನಿಜವಾದ ಬಣ್ಣ ಬಯಲಾಗುತ್ತದೆ. ಅಂದರೆ ಅವಳು ವಸ್ತುಗಳನ್ನು ಎಸೆಯುತ್ತಾಳೆ, ಮುರಿದು ಹಾಕುತ್ತಾಳೆ ಮತ್ತು ಮತ್ತು ಕಿರುಚುತ್ತಾಳೆ. ಅಂಕಿತಳ ಇಂತಹ ವಿಚಾರಗಳನ್ನು ನೆರೆ ಮನೆಯವರೊಂದಿಗೆ ಒಪ್ಪಿಸುತ್ತಿರುವಾಗ ಅಲ್ಲೇ ನಗುತ್ತಾ ಕುಳಿತ ಅಂಕಿತಾಳು ತಾಯಿಯ ಮಾತುಗಳನ್ನೆಲ್ಲಾ ಕೇಳಿಸಿಕೊಳ್ಳುತ್ತಾಳೆ. ಇದರಿಂದ ತಾಯಿಯಿಂದ ಹೇಳಲ್ಪಟ್ಟ ವರ್ತನೆಗಳನ್ನು ಕಲಿಯುವ ಸಾಧ್ಯತೆಗಳೇ ಹೆಚ್ಚು.

## ಋ) ಕಲಿಕೆಗೆ ಅವಕಾಶಗಳ ಕೊರತೆ

ಸರಿಯಾದ ಪ್ರಚೋದನೆ ಇಲ್ಲದೆ ಎಷ್ಟೊ ಅಸಾಮರ್ಥ್ಯ ಮಕ್ಕಳು ಬಲಿಯಾಗುತ್ತಾರೆ. ಮತ್ತು ಕಲಿಕೆಗೆ ಬೇಕಾದ ಕಡಿಮೆ ಅವಕಾಶದಿಂದ ವಂಚಿತರಾಗುತ್ತಾರೆ. ತಂದೆ ತಾಯಂದಿರು ತಮ್ಮ ಇತರೇ ಮಕ್ಕಲ ಕಡೆಗೆ ಗಮನಹರಿಸುವಾಗ ಮಕ್ಕಳ ಕಡೆಗೆ ನ್ಯೂನತೆಯುಳ್ಳ ಗಮನ ಕಡಿಮೆ ಆಗಬಹುದು. ಮಗುವು ತಾನೇ ಸ್ವತ: ಕೆಲಸ ಮಾಡಲು, ಅದರಿಂದ ಅವನಿಗೆ ಕಲಿಯಲು ಅವಕಾಶ ಕೊಡದೇ ಇದ್ದಾಗ, ಮಗುವು ವಿಷಯಗಳನ್ನು, ಕುಶಲತೆಗಳನ್ನು ಕಲಿಯುವಲ್ಲಿ ಹಿಂದೆ ಬೀಳುತ್ತದೆ ಉದಾ: ಮಗುವಿಗೆ ತರಕಾರಿ ಹಣ್ಣುಗಳನ್ನು ಕತ್ತರಿಸಲು ಚಾಕುವನ್ನು ಕೊಡದೇ ಇರುವುದು. ಈ ರೀತಿ ಚಾಕು ಕೊಟ್ಟರೆ ಮಗು ಕೈಬೆರಳು ಕತ್ತರಿಸಿಕೊಳ್ಳಬಹುದೆಂಬ ಭಯವು ಆವರಿಸುವುದರ ಕಾರಣ ನಿಮ್ಮ ಮಗುವು ಸಹಾಯಪೂರ್ಣ ಕಲಿಕೆಯ ಅವಕಾಶದಿಂದ ವಂಚಿತಗೊಂಡಂತಾಗುತ್ತದೆ.

ಏಳು ವರ್ಷದ ಜಗದೀಶನನ್ನು ಮಾನಸಿಕ ಬೆಳವಣಿಗೆಯಲ್ಲಿ ಮತ್ತು ಭಾಷೆಯ ಬೆಳವಣಿಗೆಯಲ್ಲಿ ಹಿಂದುಳಿದಿವನೆಂಬ ದೂರಿನೊಡನೆ ಕರೆತರಲಾಯಿತು. ತಂದೆ ತಾಯಿಗಳು ಜಗದೀಶನಿಗೆ ಅವನು ಬಟ್ಟೆಗೆ ಗುಂಡಿ ಹಾಕುವುದಿಲ್ಲ, ಸ್ವತ: ಊಟ ಮಾಡುವುದಿಲ್ಲ. ಮತ್ತು ಕೈಕಾಲು, ಮುಖ ತೊಳೆದುಕೊಂಡು ತನ್ನ ಬಟ್ಟೆಗಳನ್ನು ತಾನೇ ಧರಿಸಿಕೊಳ್ಳುವುದಿಲ್ಲ ಎಂದು ದೂರಿದರು ಹಾಗೂ ಅವನ ಕೆಲಸಗಳನ್ನು ಮಾಡಿಕೊಡಲು ಒಬ್ಬ ಆಯಾಳನ್ನು ನೇಮಕ ಮಾಡಿದ್ದು ಸಹ ಜಗದೀಶನ ತಂದೆ ತಾಯಿಯಿಂದ ತಿಳಿದುಬಂದಿತು. ಅನಂತರದ ಸೂಕ್ಷ್ಮ ಪರಿಶೀಲನೆಯಿಂದ ತಿಳಿದು ಬಂದಿದ್ದೇನೆಂದರೆ ಜಗದೀಶನು ನಿಜವಾಗಿಯು ಅಶಕ್ತನಲ್ಲ. ಅವನು ತನ್ನ ಕೆಲಸಗಳನ್ನು ತಾನು ಮಾಡಿಕೊಳ್ಳಬಲ್ಲ. ಆದರೆ ಅವನ ತಂದೆ ತಾಯಿಗಳು ಅವನ ಕೆಲಸವನ್ನು ಅವನೇ ಮಾಡಿಕೊಳ್ಳುವುದರ ಅವಕಾಶ ನೀಡಿರಲಿಲ್ಲ. ಈ ಅವಕಾಶ ವಂಚನೆಯೇ ಅವನು ತನ್ನ ಕೆಲಸಗಳನ್ನು ಮಾಡುವುದರಲ್ಲಿ ಅಶಕ್ತನಾಗಿರುವುದಕ್ಕೆ ಕಾರಣವಾಗಿತ್ತು. ನಂತರದ ತರಬೇತಿಯಿಂದ ಜಗದೀಶನು ತಂದೆ ತಾಯಿಗಳು ಇವನ ಕೈಯಲ್ಲಿ ಮಾಡಲಾಗುವುದಿಲ್ಲ ಎಂದು ಹೇಳಿದ ಎಲ್ಲಾ ಕೆಲಸಗಳನ್ನು ಮಾಡಿ ತೋರಿಸಿದನು.

## ಎ) ಶೀಘ್ರಪರಿಹಾರಕ್ಕೆ ಮೊರೆಹೋಗದಿರಿ

ಮಗುವಿನಲ್ಲಿ ಇರುವಂತಹ ನ್ಯೂನತೆಗಳನ್ನು ಸರಿಯಾಗಿ ಕಂಡು ಹಿಡಿದು ಉತ್ತಮ ಯೋಜನೆಯಿಂದ ಮುಂದೆ ತರುವಂತಹ ಈ ತರಬೇತಿ ಕಾರ್ಯಕ್ರಮದಲ್ಲಿ ಸಾಕಷ್ಟು ಸಹನೆ ಇರಬೇಕು. ತಂದೆ ತಾಯಿಯ ಆಸೆಗೆ ಅನುಸಾರವಾಗಿ ಯಾವುದೇ ಶೀಘ್ರ ಪರಿಹಾರಗಳನ್ನು ನೀಡಲು ಸಾಧ್ಯವಿಲ್ಲ. ಕೌಶಲ್ಯತೆಯ ನ್ಯೂನತೆಯುಳ್ಳ ಮಗುವನ್ನು ಸರಿಪಡಿಸಲು ಯಾವುದೇ ಶೀಘ್ರವಾದ ಪರಿಹಾರಗಳನ್ನು ನೀಡಲು ಸಾಧ್ಯವಿಲ್ಲ. ಕೌಶಲ್ಯತೆ ಕಲಿಯಲು ಶೀಘ್ರವಾದ ಪರಿಹಾರಗಳು ಇಲ್ಲ. ಆದರೂ ಸಹ ನಿಧಾನವಾಗಿ ಕಾಳಜಿವಹಿಸಿ ಕೌಶಲ್ಯಭರಿತ ತರಬೇತಿ ಕಾರ್ಯಕ್ರಮದಿಂದ ಪರಿಣಾಮಕಾರಿ ಫಲಿತಾಂಶಗಳನ್ನು ಪಡೆಯಬಹುದು. ಇದು ನಿಧಾನವಾದರೂ ಸಹ ನಿಶ್ಚಯವಾಗಿ ಸಾಧ್ಯ. ಯಾವ ಪೋಷಕರು ಇದನ್ನು ಅರಿತುಕೊಳ್ಳುವುದಿಲ್ಲವೋ, ಅಂಥಹವರು ಅವರು ಸಲಹೆ ನೀಡುವ ಅನೇಕ ಕೇಂದ್ರಗಳಿಗೆ ಭೇಟಿ ನೀಡುತ್ತಾ, ಅವುಗಳನ್ನು ಆಗಿಂದ್ದಾಗ್ಗೆ ಬದಲಾಯಿಸುತ್ತ, ಅವೈಜ್ಞಾನಿಕ ವಿಧಾನಗಳನ್ನು ಅಳವಡಿಸಿಕೊಂಡು ಕೊನೆಯೇ ಇಲ್ಲದ ಹಾಗೆ ಅಲೆಯುತ್ತಾರೆ. ಈ ರೀತಿ ತಿರುಗಿ, ಕಾರಣವನ್ನು ತಿಳಿಯದೆ, ಹಣ ಕಳೆದುಕೊಂಡು, ಅಮೂಲ್ಯವಾದ ಸಮಯುವನ್ನೂ ಕಳೆದುಕೊಳ್ಳುತ್ತಾರೆ ಮುಖ್ಯವಾಗಿ ಸಮಸ್ಯೆಯನ್ನು ನಿವಾರಿಸಬಹುದೆಂಬ ವಿಶ್ವಾಸವನ್ನು ಕಳೆದುಕೊಳ್ಳುತ್ತಾರೆ. ಇದರ ಬದಲು ಯಾವುದಾದರು ಒಂದು ಉತ್ತಮ ತರಬೇತಿ ಕೇಂದ್ರವನ್ನು ಕಂಡುಕೊಂಡು, ಅಲ್ಲಿನ ಕಾರ್ಯಕ್ರಮಗಳನ್ನು ಪಾಲಿಸಿಕೊಂಡು ಹೋದರೆ, ಅವರ ಮಗುವಿನಲ್ಲಿ ನಿಧಾನವಾಗಿಯಾದರು, ಬಹು ಉತ್ತಮ ಬೆಳವಣಿಗೆ ತರಬಹುದು. ಈ ಮೇಲಿನ ಅಂಶಗಳು ಹಲವಾರು ವೈಜ್ಞಾನಿಕ ಸಂಶೋಧನೆಗಳಿಂದ ಸಾಬೀತಾಗಿರುತ್ತದೆ.

ಪಾಯಲ್ ನಾಲ್ಕುವರ್ಷದ ಮಗು. ಪೋಷಕರ ಮಾತಿಗೆ ಓಗೂಡುವುದಿಲ್ಲವೆಂಬುದಕ್ಕಾಗಿ ಮಗುವನ್ನು ಕರೆತರಲಾಯಿತು. ಕೆಲವು ಸೂಚನೆಗಳಿಗೆ, ಹೆಸರು ಹಿಡಿದು ಕರೆದಾಗ, ಅವಳು ಅಸಂಬದ್ದವಾಗಿ ಪ್ರತಿಕ್ರಿಯಿಸುತ್ತಿದ್ದಳು.

ಯಾವಾಗಲೋ ಒಮ್ಮೆ ಅವಳು ಪಪ್ಪಾ, ಮಮ್ಮಾ, ಇತ್ಯಾದಿ ಪದಗಳನ್ನು ಗೊತ್ತಾಗುತಿದ್ದಳು. ಆದರೆ ಅವು ಅನುಕರಣ ಪದಗಳಾರಲಿಲ್ಲ. ಆಕೆಯ ತಾತ ಆ ಅವಿಭಕ್ತ ಕುಟುಂಬದ ನಿರ್ಣಾಯಕ ಯಜಮಾನ. ಆಗಾಗ ಆತ ಈ ಮಗುವಿನ ನಿಧಾನವಾದ ಬೆಳವಣಿಗೆ ಹೆದರಿಕೊಳ್ಳುವಂತಹದೇನಲ್ಲ ಎಂದು ಸಮರ್ಥಿಸಿಕೊಳ್ಳುತ್ತಿದ್ದ. ಆತ ಎಳೆತನದಲ್ಲಿ ತಡವಾಗಿ ಮಾತು ನಡಿಗೆಗಳನ್ನು ಕಲಿತನಂತೆ ತಜ್ಞರೊಡನೆ ಈ ವಿಚಾರದಲ್ಲಿ ಸಮಾಲೋಚಿಸುವುದು ಒಳ್ಳೆಯದು ಅಂತ ಒತ್ತಾಯ ಮಾಡುವವರೆಗೂ, ಅಂದರೆ ಐದು ವರ್ಷ ವಯಸ್ಸು ದಾಟುವವರೆಗೂ ಮಗುವಿನ ಪ್ರಥಮ ವೈದ್ಯಕೀಯ ಸಮಾಲೋಚನೆಯ ಕಡೆಗೆ ಗಮನ ಹರಿಸಲಿಲ್ಲ. ನಂತರ ನರರೋಗ ತಜ್ಞರು, ಪೀಡಿಯಾಟ್ರಿಷನ್, ಹೋಮಿಯೋಪಥಿ / ಆಯುರ್ವೇದ ತಜ್ಞರುಗಳ ಜೊತೆ ಸಮಾಲೋಚನೆ ನಡೆಯಿತು. ವಿಧವಿಧವಾದ ನ್ಯೂನತೆಗಳನ್ನು ಗಮನಿಸಲಾಯಿತು. ಅದು ಬುದ್ಧಿಮಾಂದ್ಯತೆಯೇ ಶ್ರವಣದೋಷವೇ, ಆಟಿಸ್ಟಿಕ್ ತೊಂದರೆಯೇ, ಯಾವುದು? ಮಗುವಿನ ತಲೆಬುರುಡೆಯ ಎಕ್ಸರೇ, ಇಸಿಜಿ, ಕಿವಿ ಪರೀಕ್ಷೆ ಸಿಟಿ ಸ್ಕ್ಯಾನ್, ಎಂ. ಆರ್. ಐ, ರಕ್ತ, ಮೂತ್ರ – ಮಲ ಪರೀಕ್ಷೆಗಳೂ ಹೀಗೆ ಎಲ್ಲವೂ ಆದವು ಅವಳ ಕಡಿಮೆಮಟ್ಟದ ಬುದ್ಧಿಶಕ್ತಿಯನ್ನು ಹೆಚ್ಚು ಮಾಡುತ್ತೇವೆಂದು ಯಾರೋ ಬ್ರೈನ್ ಟಾನಿಕ್ ಕೊಡಲು ಪ್ರಾರಂಭಿಸಿದರು. ಈ ಎಲ್ಲಾ ಪರೀಕ್ಷೆ, ಚಿಕಿತ್ಸೆಗಳ ನಂತರವೂ, ಪಾಯಲ್‌ನ ತಂದೆತಾಯಿಯರು ಇನ್ನೂ ಕತ್ತಲಲ್ಲೇ ಇದ್ದಾರೆ.

## ಐ) ದೈಹಿಕ ಶಿಕ್ಷೆ ಕೂಡದು

ಕ್ರೂರ ಶಿಕ್ಷೆಗೆ ಒಳಗಾದ ಮಗುವು ಆಕ್ರಮಣಕಾರಿ ವರ್ತನೆಯನ್ನು ಬೆಳೆಸಿಕೊಳ್ಳಬಹುದು. ಚಿಕ್ಕ ಮಕ್ಕಳಿಗೆ ಯಾವ ಕಾರಣಕ್ಕೂ ಶಿಕ್ಷೆ ನೀಡುವುದು ಸರಿಯಲ್ಲ. ಆದರೂ ಸಹ ಕೆಲವು ಮಕ್ಕಳಿಗೆ ಕ್ರೂರ ಶಿಕ್ಷೆ ನೀಡುವುದು ನಡೆಯುತ್ತಲೇ ಇದೆ. ಅವೆಂದರೆ ಕೋಲಿನಿಂದ ಹೊಡೆಯುವುದು, ಬರೆ ಹಾಕುವುದು, ಸಾರ್ವಜನಿಕ ಸ್ಥಳಗಳಲ್ಲಿ ಮಗುವನ್ನು ಬೆತ್ತಲೆಗೊಳಿಸುವುದು ಇತ್ಯಾದಿ. ಈ ರೀತಿ ದೈಹಿಕವಾಗಿ ಮಕ್ಕಳನ್ನು ತಪ್ಪಾಗಿ ಬಳಸಿಕೊಳ್ಳುವುದು ಕೆಲವೊಂದು ಮನೆಯಲ್ಲಿ ಹಾಗೂ ಕೆಲವೊಂದು ಶಾಲಾಪೂರ್ವ ಘಟಕಗಳಲ್ಲಿ ನಡೆಯುತ್ತದೆ. ಮೇಜಿನ ಮೇಲಿರುವಂತಹ ಸ್ಕೇಲ್ ಅಥವಾ ಕಡ್ಡಿ ಇರುವುದು ಭಯದ ಚಿಹ್ನೆ. ಆದರೆ ಅವುಗಳು ಹೊಸದಾಗಿ ಕಲಿಯುವಂತಹ ಮಕ್ಕಳಿಗೆ ಹೆದರಿಕೆಯ ಚಿಹ್ನೆಯಾಗಿ ಗ್ರಹಿಸಬಹುದು. ಭಗ್ನತೆಯ ಶಿಕ್ಷಣದ ಸಂದರ್ಭದಲ್ಲಿ ಮಗುವಿಗೆ ಜಿಗುಟುವುದು, ಹೊಡೆಯುವುದು, ಕೋಪದಿಂದ ದಿಟ್ಟಿಸಿ ನೋಡುವುದು ಇಂತಹವುಗಳು ಮಕ್ಕಳಿಗೆ ನೋವು ಮತ್ತು ನಿರಾಕರಣೆಯ ಭಾವನೆಯನ್ನು ತರುತ್ತವೆ. ಈ ರೀತಿಯ ನಕಾರಾತ್ಮಕ ಅನುಭವಗಳು ಮಗುವಿಗೆ ಕಲಿಕೆಯ ಚಟುವಟಿಕೆಯನ್ನು ಮನರಂಜಿಸಲು ಬಿಡುವುದಿಲ್ಲ. ಈ ರೀತಿಯ ತಾಯಿ ಮಗುವಿನ ಸಂಬಂದ ಉದ್ದೇಶ ಪೂರ್ವಕವಾಗಿರುವುದಿಲ್ಲ. ತಾಯಿಯು ಮಗುವಿಗೆ ಶಿಕ್ಷೆ ನೀಡಿದ ನಂತರ ಮಗುವಿನ ಮೇಲೆ ಪ್ರೀತಿ ತೋರಿಸಿ ಮುತ್ತು ನೀಡುವುದು. ಮಗುವಿನ ಒಳ್ಳೆಯದಕ್ಕೆಂದು ನಾನು ಹೀಗೆ ಮಾಡುವುದು ಸರಿ ಎಂದು ಯೋಚಿಸಬಹುದು. ಆದರೆ ಅದು ಮಗುವಿನ ಕಲಿಕೆ ಸಂದರ್ಭದಲ್ಲಿ ನಿಷ್ಪ್ರಯೋಜಕವಾಗುತ್ತದೆ. ಶಿಕ್ಷೆ ನೀಡುವುದರ ಮೂಲಕ ಮಗುವಿಗೆ ಕಲಿಸುತ್ತೇವೆ ಎಂಬ ಭಾವನೆ ಸುಳ್ಳು.

ತಾಯಿ ಮಗುವನ್ನು ಶಿಕ್ಷಿಸಿದ ಬಳಿಕ ಮಗುವನ್ನು ಮುದ್ದಿಸಬಹುದು, ಹಿತವಾದ ಪ್ರೀತಿಯನ್ನು ತೋರಿಸಬಹುದು. ಆದರೆ ಶಿಕ್ಷೆ, ಶಿಕ್ಷೆಯೇ ಅದು ಮಗುವಿನ ಮನಸ್ಸಿನಲ್ಲಿ ತೀವ್ರವಾಗಿ ಉಳಿದುಕೊಳ್ಳಬಹುದು. ಅತಿಯಾದ ಶಿಸ್ತಿಗೆ ಮಗುವನ್ನು ಒಳಪಡಿಸುವುದು ಸೂಕ್ತವಲ್ಲ. ನಾವು ಇಲ್ಲಿ ನಿಮಗೆ ಶಿಕ್ಷಣ ನೀಡುವುದು. ಅತಿಯಾದ ಶಿಸ್ತನ್ನು ಬೆಳೆಸುವುದಕ್ಕಲ್ಲಾ. ಇದು ನಮ್ಮ ಉದ್ದೇಶವೂ ಅಲ್ಲಾ.

ಎಂಟು ವರ್ಷದ ರಕ್ಷಿತನನ್ನು ಕಿಂಚಿತ್ತು ಬೆಳವಣಿಗೆಯಲ್ಲಿ ಹಿಂದುಳಿದಿರುವನೆಂದು ವಿಶ್ಲೇಶಿಸಲಾಗಿದ್ದು ಅವನು ಎಲ್ಲಾ ಚಟುವಟಿಕೆಗಳನ್ನು ನಿಧಾನವಾಗಿ ಮಾಡುತ್ತಿದ್ದನು. ರಕ್ಷಿತನ ತಂದೆಯು ಅವನಿಗೆ ಅಂಕಿಗಳ ಬಗ್ಗೆ ಕುಶಲ ತರಬೇತಿ, ಪದ್ಯ ಉಚ್ಚಾರಣೆ, ಸಾಲು ಬರವಣಿಗೆ, ಗುರುತಿಸುವಿಕೆ, ದೊಡ್ಡದು, ಚಿಕ್ಕದು, ದೊಡ್ಡ ಅಂಕಿ, ಚಿಕ್ಕ ಅಂಕಿಗಳ ಅರಿವು ಮತ್ತು ಹಲವು ವಸ್ತುಗಳನ್ನು ತೋರಿಸುವುದರ ಬಗ್ಗೆ ಯೋಜನೆ ಹಾಕಿಕೊಂಡು ಹೇಳಿಕೊಡುತ್ತಿದ್ದರು. ಕೆಲವೊಮ್ಮೆ ಹೇಳಿಕೊಡುವಾಗ ತಮ್ಮ ತಾಳ್ಮೆಯನ್ನು ಕಳೆದುಕೊಂಡು ಬೈದದ್ದು ಮತ್ತು ಹೊಡೆದದ್ದೂ ಉಂಟು ಮತ್ತು ಹೇಳಿಕೊಡುವಾಗ ರಕ್ಷಿತನ ಗಮನ ಹಿಡಿಯಲು ಬೆತ್ತವನ್ನು ಜೊತೆಯಲ್ಲಿ ಇಟ್ಟುಕೊಳ್ಳುತ್ತಿದ್ದರು. ಬೆತ್ತವನ್ನು ಇಟ್ಟುಕೊಂಡು ಹೆದರಿಸಿ ಅವನನ್ನು ಓದುವಂತೆ ಒತ್ತಾಯಿಸುತ್ತಿದ್ದರು. ಇದನ್ನೂ ಅವನ ತಂದೆ ಎಷ್ಟರ ಮಟ್ಟಿಗೆ ಮಾಡಿದರೆಂದರೆ ರಕ್ಷಿತನು ತಂದೆಯ ಮುಖ ಕಂಡೊಡನೆ ನೆಪಗಳನ್ನು ಹೇಳಿ ಅಂಕಿಗಳನ್ನು ಬಿಟ್ಟು ಬೇರೆ ಕಲಿಕೆಗೆ ಜಾರುತ್ತಿದ್ದ. ಹೀಗೆ ರಕ್ಷಿತನಿಗೆ ಕೊನೆಯಲ್ಲಿ ಅಂಕಿಗಳನ್ನು ಕಲಿಯುವ ಆಸಕ್ತಿಯೇ ಹೊರಟು ಹೋಯಿತು.

ನಿಮ್ಮ ಮಗುವಿಗೆ ಕೆಲವೊಂದು ಉತ್ತಮ ವರ್ತನೆಯನ್ನು ಕಲಿಸುವಲ್ಲಿ ನೀವು ನಿಷ್ಪ್ರಯೋಜಕವಾದಾಗ ಅದನ್ನು ಸರಿಯಾದ ರೀತಿಯಲ್ಲಿ ಪರಿಶೀಲಿಸಿ. ತಪ್ಪು ಯಾರಿಂದಾದರೂ ಆಗಿದೆಯೇ ? ಅಥವಾ ಕೆಳಗಿನ ಅಂಶಗಳಿಂದ ತಪ್ಪಾಗಿದೆಯೇ ಎಂದು ತಿಳಿಯಿರಿ. ಕೆಳಗಿನವುಗಳನ್ನು ಓದಿ.

1. ನೀವು ಆಯ್ಕೆ ಮಾಡಿಕೊಂಡಿರುವಂತಹ ವರ್ತನೆಯ ಗುರಿಯು ನಿಮ್ಮ ಮಗುವಿನ ಮಟ್ಟಕ್ಕೆ ಸರಿ ಇದೆಯೇ ? ಇಲ್ಲವೇ ? ಎಂಬುದನ್ನು ಪರಿಶೀಲಿಸಿ.
2. ನೀವು ಆಯ್ಕೆ ಮಾಡಿಕೊಂಡಿರುವ ವರ್ತನೆಯ ಗುರಿಯು ನಿಮ್ಮ ಮಗುವಿನ ಮಟ್ಟಕ್ಕಿಂತ ಹೆಚ್ಚಾಗಿದೆಯೇ ? ಅಥವಾ ಕಡಿಮೆ ಇದೆಯೇ ? ಎಂಬುದನ್ನು ಪರಿಶೀಲಿಸಿ.
3. ನೀವು ಆಯ್ಕೆ ಮಾಡಿಕೊಂಡಿರುವ ವರ್ತನೆಯನ್ನು ಕಲಿಯಲು ಮಗುವಿಗೆ ಬೇಕಾದ ಸಲಕರಣೆಗಳ ಬಗ್ಗೆ ಗಮನ ಹರಿಸಿ.
4. ಅಭ್ಯಾಸ ಮಾಡುವ ಭಾಗಗಳು ಸರಿಯಾಗಿವೆಯೇ ಎಂದು ನೋಡಿ.
5. ಕಲಿಕೆಯ ತರಬೇತಿಗಳು, ತಂತ್ರಗಳು ನಿಮ್ಮ ಮಗುವಿಗೆ ಸರಿ ಹೊಂದದೇ ಇರಬಹುದು/ಅಥವಾ ಆಯ್ಕೆ ಮಾಡಿಕೊಂಡಿರುವ ವರ್ತನೆಯ ಗುರಿ ಸರಿಹೊಂದದೇ ಇರುವುದು.
6. ಕಲಿಕೆಯ ಸಮಯದಲ್ಲಿ ಪೋಷಕರು ಮಗುವು ತೋರಿಸಿದ ಪ್ರತಿಕ್ರಿಯೆಗೆ, ಸರಿಯಾದ ರೀತಿಯಲ್ಲಿ ಪ್ರತಿಕ್ರಿಯಿಸದೇ, ಹೊಗಳದೇ ಇರುವುದು, ಮಗುವು ಕಲಿಕೆಯಲ್ಲಿ ಹಿಂದುಳಿದಿರುವುದಕ್ಕೆ ಕಾರಣವಾಗಿರಬಹುದು. ಅಥವಾ ಮಾರ್ಗದರ್ಶನಕ್ಕೆ ಅನುಗುಣವಾಗಿ ಕಲಿಸದೇ ಇರುವುದು ಮಗುವಿನ ಕಾರ್ಯದಕ್ಷತೆಗೆ ಕುಂದುಂಟಾಗಿರಬಹುದು.
7. ಕಲಿಯುವ ಮಗುವಿಗೆ ಶಿಕ್ಷಕ/ಶಿಕ್ಷಕಿ ನೀಡಿದ ಚಟುವಟಿಕೆಯ ವಿವರಣೆಯು ಪರಿಣಾಮಕಾರಿಯಗಿಲ್ಲದೇ ಇರುವುದು, ಮಗುವು ಕಲಿಕೆಯಲ್ಲಿ ಹಿಂದುಳಿದಿರುವುದಕ್ಕೆ ಕಾರಣವಾಗಿರಬಹುದು.
8. ಅವಶ್ಯಕತೆಗಳಿಗೆ ಅನುಗುಣವಾಗಿ ಶೈಕ್ಷಣಿಕ ಸಾಧನಗಳನ್ನು ಜೋಡಿಸದೇ ಇರುವುದು, ಅಥವಾ ಮಗುವಿನ ಕಲಿಕೆಗೆ ಅನುಸಾರವಾಗಿ ಜೋಡಿಸದೇ ಇರುವುದು, ಮಗು ಕಲಿಕೆಯಲ್ಲಿ ಹಿಂದುಳಿದಿರುವ ಕಾರಣ ಆಗಿರಲೂಬಹುದು.
9. ವರ್ತನೆಯನ್ನು ಕಲಿಸುವಾಗ ಪರ್ಯಾಯವಾದ ಶೈಕ್ಷಣಿಕ ಸಾಧನ. ಚಿಕಿತ್ಸೆ ಅಥವಾ ಚಟುವಟಿಕೆಗಳನ್ನು ಬಳಸದೇ ಇರುವುದು.
10. ಸಮಸ್ಯಾತ್ಮಕ ವರ್ತನೆಗೆ ಅತೀ ಶೀಘ್ರವಾದ ಪರಿಹಾರಗಳು ಬೇಕಾಗುತ್ತವೆ. ಅದಕ್ಕೆ ಸರಿಯಾದ ಯೋಜನೆ ಇಲ್ಲದಿರುವ ಶೈಕ್ಷಣಿಕ ಕಾರ್ಯಕ್ರಮದ ಮೊದಲು ಅದರ ಯೋಜನೆ ಬಹಳ ಮುಖ್ಯ.
11. ಕಲಿಕೆಯ ಸಮಯದಲ್ಲಿ ಕಾರ್ಯದಕ್ಷತೆಯಲ್ಲಿ ತಪ್ಪಾಗುವುದು ಹಾಗೂ ಮಗುವಿನ ವೈಯಕ್ತಿಕತೆಯನ್ನು ಗಮನಿಸದಿರುವುದು.
12. ಕಲಿಕೆಯ ಗುರಿಯನ್ನು ಸರಳ ಮಾಡಬೇಕಾಗಬಹುದು. ಪುನ: ಆ ವಿಷಯವನ್ನು ಕಲಿಸುವುದರ ಮುಂಚೆ ಕಲಿಕೆಯ ಗುರಿಗಳನ್ನು ಸರಿಪಡಿಸಬೇಕು.
13. ಆಯ್ಕೆ ಮಾಡಿಕೊಂಡಿರುವ ವರ್ತನೆಗೆ ನಿಮ್ಮ ಕಾರ್ಯದಕ್ಷತೆಯ ಮಟ್ಟವು ನಿಮ್ಮ ಮಗುವಿನ ಮಟ್ಟ, ಮತ್ತು ಅದರ ಅವಶ್ಯಕತೆಗೆ, ಸರಿ ಹೊಂದದೇ ಇರಬಹುದು. ಅಥವಾ ಕಲಿಕೆಯ ವಸ್ತು ಗುರಿಯು ತುಂಬಾ ಕಠಿಣವಾಗಿರಬಹುದು. ಕೌಶಲ ತರಬೇತಿ ಕಾರ್ಯಕ್ರಮಕ್ಕೆ ಆಯ್ಕೆ ಮಾಡಿಕೊಂಡಿರುವ ವರ್ತನೆಯು ನಿಮ್ಮ ಮಗುವಿನ ಮಟ್ಟಕ್ಕೆ ಸರಿಹೊಂದದೇ ಇರಬಹುದು.

ವೈಕಲ್ಯತೆಯ ಮಕ್ಕಳಿಗಾಗಿ ತರಬೇತಿ ನೀಡುವುದರ ಬಗ್ಗೆ ಪುಸ್ತಕಗಳು ಮುಂದೆ ನೀಡಲಾಗಿದೆ. ಆ ಪುಸ್ತಕಗಳನ್ನು ಓದಿ ಅದರಲ್ಲಿರುವ ಸಾಧನಾ ಸಾಮಗ್ರಿಗಳ ಬಗ್ಗೆ ತಿಳಿಯಿರಿ. ಶಿಕ್ಷಣ ನೀಡುವುದರಲ್ಲಿ ನಿಮ್ಮ ಪ್ರಯಾಣ ಸುಖಕರವಾಗಿರಲಿ ಎಂದು ಹಾರೈಸುತ್ತೇವೆ.

## ಹೆಚ್ಚಿನ ವಿಷಯಕ್ಕಾಗಿ


1. Narayan, J. (1992). Handbook for the Trainers of Mental Retardation: Preprimary Level. Secunderabad: National Institute for the Mentally Handicapped.

2. Peshawaria, R., & Venkatesan, S. (1992). Behavior Approaches to Teaching Children with Mental Retardation: A Manual for Teachers. Secunderabad: National Institute for the Mentally Handicapped.

3. Peshawaria, R., & Venkatesan, S. (1992). Behavior Assessment Scales for Indian Children with Mental Retardation. Secunderabad: National Institute for the Mentally Handicapped.

4. Peshawaria, R., Menon, D.K., Ganguly, R., Roy, S., Pillay, R.P.R.S., Gupta, A., and Hora, R.K. (1994). Moving Forward: A Guide to Parents. Secunderabad: National Institute for the Mentally Handicapped.

5. Peshwaria, R. (1992). Managing Behavior Problems in Children: A Guide to Parents. New Delhi: Vikas Publications.

6. Subbarao, T.A. (1992). Manual on Developing Communication Skills in Mentally Retarded Persons. Secunderabad: National Institute for the Mentally Handicapped.

7. Venkatesan, S. (2003). Children with Developmental Disabilities: A Practitioners Guide on Training Activities for Toddlers and Preschoolers. New Delhi: Sage Publications.

# Organization Chart of AIISH, Mysore



# ವಾಕ್ ಶ್ರವಣ ಸಂಸ್ಥೆಯ ಹುಟ್ಟು ಹಾಗೂ ಬೆಳವಣಿಗೆ

ಅಖಿಲ ಭಾರತ ವಾಕ್-ಶ್ರವಣ ಸಂಸ್ಥೆಯು ದೇಶದಲ್ಲೇ ಒಂದು ಪ್ರಮುಖ ಸಂಸ್ಥೆಯಾಗಿದೆ. ಇದು ವಾಕ್-ಶ್ರವಣ ಕ್ಷೇತ್ರದಲ್ಲಿ ತರಬೇತಿಯನ್ನು ನೀಡುತ್ತದೆ. ೧೯೬೬ ರ ಅಕ್ಟೋಬರ್ ೧೦ರಂದು, ಭಾರತ ಸರ್ಕಾರದ ಆರೋಗ್ಯ ಮತ್ತು ಪರಿವಾರ ಕಲ್ಯಾಣ ಸಚಿವಾಲಯದಡಿ ಇದು ಒಂದು ಸ್ವಯಮಾಡಳಿತ ಸಂಸ್ಥೆಯಾಗಿ ಸ್ಥಾಪನೆಗೊಂಡಿತು. ಸಂಶೋಧನೆ, ನಿರ್ವಹಣೆ ಮತ್ತು ಪುನರ್ವಸತಿ ಈ ಸಂಸ್ಥೆಯ ಗುರಿಯಾಗಿರುತ್ತದೆ. ಮೈಸೂರಿನ ಮಹಾರಾಜರಾಗಿದ್ದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಅವರು ನೀಡಿದ ೩೨ ಎಕರೆಯ (೨ ಆವರಣಗಳಲ್ಲಿ) ವಿಶಾಲವಾದ ಪ್ರದೇಶದಲ್ಲಿ ಈ ಸಂಸ್ಥೆಯಿದೆ.

೧೮೬೦ರ ಸಂಘನೋಂದಣಿ ಶಾಸನ (ಪಂಜಾಬ್ ತಿದ್ದುಪಡಿ), ೧೯೫೭ ಅನ್ವಯ ಈ ಸಂಸ್ಥೆಯು ಒಂದು ಸಂಘವೆಂದು ನೋಂದಣಿಗೊಂಡಿದ್ದು ಸ್ವಯಮಾಡಳಿತ ಸಂಸ್ಥೆಯಾಗಿ ಕೇಂದ್ರ ಆರೋಗ್ಯ ಮತ್ತು ಕುಟುಂಬಕಲ್ಯಾಣ ಮಂತ್ರಾಲಯದ ಕೆಳಗೆ ಕಾರ್ಯನಿರ್ವಹಿಸುತ್ತಿದೆ.

ಪ್ರಾಥಮಿಕವಾಗಿ ತರಬೇತಿ ಸಂಸ್ಥೆಯಾಗಿ ಪ್ರಾರಂಭಗೊಂಡ ಈ ಸಂಸ್ಥೆಯು ಪ್ರಾರಂಭದಿಂದಲೇ ಸ್ನಾತಕೋತ್ತರ ಪದವಿಮಟ್ಟದಲ್ಲಿ ತರಬೇತಿ ನೀಡತೊಡಗಿತು. ಬಿ. ಎಸ್ಸಿ (ವಾಕ್-ಶ್ರವಣದಲ್ಲಿ) ತರಬೇತಿಯು ೧೯೬೭ರಲ್ಲಿ ಪ್ರಾರಂಭವಾಯಿತು. ಸಂಸ್ಥೆಯು ಪಿಹೆಚ್. ಡಿಯ ಜೊತೆಗೆ ಹಲವಾರು ಅಲ್ಪಕಾಲಿಕ ತರಬೇತಿ ಕಾರ್ಯಕ್ರಮಗಳನ್ನೂ ನಡೆಸುತ್ತಿದೆ. ಪದವಿಯನ್ನು ಕೊಡುವಲ್ಲಿ ಸಂಸ್ಥೆಯು ಮೈಸೂರು ವಿಶ್ವವಿದ್ಯಾನಿಲಯದ ಸಹಯೋಗವನ್ನು ಪಡೆದಿದೆ. ಇತ್ತೀಚೆಗೆ, ಬಿ. ಎಸ್ಸಿ.ಡಿ, ಡಿಪ್ಲೊಮಾ ಹಾಗೂ ವಿಶೇಷವಾದ ಸ್ನಾತಕೋತ್ತರ ಪದವಿಗಳನ್ನು ಸಂಸ್ಥೆಯು ಆರಂಭಿಸಿದೆ.

ಅನೇಕ ರೀತಿಯ ಸಂವಹನ ದೋಷವುಳ್ಳವರಿಗಾಗಿ ಸಂಸ್ಥೆಯು ಚಿಕಿತ್ಸಾ ಸೇವೆಗಳನ್ನು ಒದಗಿಸುತ್ತದೆ. ಮನೆ-ಮನೆಗೂ ಈ ಸೇವೆಯನ್ನು ವಿಸ್ತರಿಸುವ ನಿಟ್ಟಿನಲ್ಲಿ ಪ್ರಯತ್ನಗಳು ಸಾಗಿವೆ. ಸೇವೆಯನ್ನು ತಲುಪಿಸುವ ವ್ಯವಸ್ಥೆಯ ಒಂದು ದೊಡ್ಡ ಭಾಗವೆಂದರೆ ಸಾರ್ವಜನಿಕರಿಗೆ ತಿಳುವಳಿಕೆ ನೀಡುವ ಕಾರ್ಯಕ್ರಮಗಳು.

ಕಿವುಡುತನದ ಕ್ಷೇತ್ರದಲ್ಲಿ ಉನ್ನತ ಮಟ್ಟದ ಕೇಂದ್ರವೆಂದು ಈ ಸಂಸ್ಥೆಯನ್ನು ವಿಶ್ವ ಆರೋಗ್ಯ ಸಂಸ್ಥೆಯು ಗುರುತಿಸಿದೆ. ಅಲ್ಲದೆ ವಿಶ್ವವಿದ್ಯಾನಿಲಯಗಳ ಧನಸಹಾಯ ಆಯೋಗವು ಈ ಸಂಸ್ಥೆಯನ್ನು ಉನ್ನತ ಮಟ್ಟದ ಸಂಶೋಧನಾ ಕೇಂದ್ರವೆಂದು ಗುರುತಿಸಿದರೆ, ಡಿ. ಎಸ್. ಟಿಯು "ವಿಜ್ಞಾನ ಮತ್ತು ತಂತ್ರಜ್ಞಾನ ಸಂಸ್ಥೆ" ಎಂದು ಗುರುತಿಸಿದೆ.

ಈ ಸಂಸ್ಥೆಯು ಸಂಪೂರ್ಣವಾಗಿ ಭಾರತ ಸರ್ಕಾರದಿಂದ ಧನಸಹಾಯವನ್ನು ಪಡೆಯುತ್ತಿದೆ. ಕಾರ್ಯನಿರ್ವಾಹಕ ಸಲಹಾ ಮಂಡಲಿಯೊಂದರ ನಿರ್ದೇಶನದಂತೆ ಈ ಸಂಸ್ಥೆಯು ನಡೆಯುತ್ತಿದೆ. ಈ ಮಂಡಳಿಗೆ ಕೇಂದ್ರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಅಧ್ಯಕ್ಷರಾಗಿದ್ದು, ಕರ್ನಾಟಕ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರು ಉಪಾಧ್ಯಕ್ಷರಾಗಿಯೂ ಇರುತ್ತಾರೆ. ಈ ಸಂಸ್ಥೆಯ ಇತರ ಶಾಸನಬದ್ಧ ಸಮಿತಿಗಳಲ್ಲಿ ಹಣಕಾಸು ಸಮಿತಿ ಮತ್ತು ಶೈಕ್ಷಣಿಕ ಸಮಿತಿಗಳು ಸೇರಿವೆ.